Photo by S. H. Kotak



ಬಹುಮಾನ ಪಡೆದ ಶೀರ್ಷಿಕೆ

ಸೌಂದರ್ಯಸ್ಪರ್ಧೆಗೆ ಇವರಿಬ್ಬರಾದರೆ

ಕಳಿಸಿದವರು : ಎಸ್. ರಾಮಕೃಷ್ಣ

# ಚಂದಮಾಮ



## ಈ ಸಂಚಿಕೆಯಲ್ಲಿ



ಅಲ್ಲದೆ ಹಾಸ್ಯಚಿತ್ರ, ಫೋಟೋ ಶೀರ್ಷಿಕೆಯ ಸ್ಪರ್ಧೆ ಎಲ್ಲಾ ಇವೆ.

---


**ಚಂದಮಾಮ** (ಹೊರಡುವ ಎಲ್ಲಾ ಭಾಷೆಗಳಲ್ಲಿಯೂ)

**ಬಿಡಿ ಪ್ರತಿ 50 ನಯೇ ಪೈಸೇ; ವಾರ್ಷಿಕ ಚಂದಾ ರೂ. 6-00**

## ಚಂದಾದಾರರಿಗೆ ವಿಜ್ಞಪ್ತಿ

ಮುಂದಿನ ತಿಂಗಳ ಚಂದಮಾಮ ಈ ತಿಂಗಳ ಕಡೇವಾರದಲ್ಲೇ ಪೋಸ್ಟು ಮಾಡಲ್ಪಡುತ್ತದೆ. ಸಕಾಲದಲ್ಲಿ ಪತ್ರಿಕೆ ಸೇರದಿದ್ದರೆ ಅವರವರ ಪೋಸ್ಟಾಫೀಸಿನಲ್ಲಿ ಫಿರ್ಯಾದಿಮಾಡಿ ಮುಂದಿನ ತಿಂಗಳು 10 ನೇ ತಾರಿಕಿನೊಳಗೆ ನಮಗೂ ತಿಳಿಸಬೇಕೆಂದು ಕೋರುತ್ತೇವೆ. ಅನಂತರ ಬರುವ ಕಂಪ್ಲೇಂಟು—ಕಳೆದ ತಿಂಗಳ ಪತ್ರಿಕೆ ಸೇರಲಿಲ್ಲವೆಂಬ ದೂರುಗಳನ್ನು ಗಮನಿಸಲಾಗುವುದಿಲ್ಲ.



## "ಚಂದಮಾಮ" ಕ್ಕೆ ಏಜಂಟರು ಬೇಕು

ಏಜಂಟರಿಲ್ಲದ ಕಡೆಗಳಲ್ಲಿ ಸಣ್ಣ ಸಣ್ಣ ಏಜಂಟರು ಬೇಕು. ನೀವು ಏಜಂಟರಾಗಿ ಸ್ವಲ್ಪ ಪ್ರತಿಗಳನ್ನು ಕೂಡಾ ತರಿಸಿಕೊಳ್ಳಬಹುದು. ಪ್ರತಿ ತಿಂಗಳೂ **3-0-0** ಕಳುಹಿಸುತ್ತಾ ಇದ್ದರೆ ನಿಮಗೆ **8** ಪ್ರತಿಗಳನ್ನು ಕಳುಹಿಸುತ್ತೇವೆ. ಈ ಪದ್ಧತಿಯಿಂದ ನಿಮಗೆ ಪ್ರತಿ ತಿಂಗಳೂ 1-0-0 ಲಾಭವಿರುತ್ತದೆ. ಪೂರ್ಣ ವಿವರಗಳಿಗೆ ಬರೆಯಿರಿ.

ಚಂದಮಾಮ
ಪಬ್ಲಿಕೇಷನ್ಸ್
ವಡಪಳನಿ, ಮದ್ರಾಸ್ - 26.



ಯಾವ ಸ್ಥಳದಲ್ಲಾದರೂ ಸರಿ

ಸೌಂದರ್ಯ

ಸೌಕರ್ಯಗಳನ್ನು



ಹೆಚ್ಚಿಸಿಕೊಳ್ಳಬೇಕಾದರೆ

# ಉಷಾ

**ಡಿಲಕ್ಸ್ ಫಾನ್ಸ್**

ಈ ಮೊದಲೆಂದೂ ಕಂಡು ಕೇಳಿ ಅರಿಯದ ಹೊಚ್ಚ ಹೊಸ ಡಿಸೈನುಗಳು
ಎಲ್ಲಾ ಸೈಜುಗಳಲ್ಲಿ ಎಲ್ಲಾ ಎಲೆಕ್ಟ್ರಿಕ್ ಡೀಲರ್ಸರಲ್ಲಿ ದೊರಕುತ್ತವೆ

ತಯಾರಿಸುವವರು

**ದಿ ಜೆ ಇಂಜನೀರಿಂಗ್ ವರ್ಕ್ಸ್ ಲಿಮಿಟೆಡ್, ಕಲಕತ್ತಾ.**

ಸೋಲ್ ಸೆಲ್ಲಿಂಗ್ ಏಜೆಂಟ್ಸ್

**ಏಜೆಂಟ್ಸ್ ಅಂಡ್ ಡಿಸ್ಟ್ರಿಬ್ಯೂಟರ್ಸ್ ಪ್ರೈವೇಟ್ ಲಿಮಿಟೆಡ್,**

ಹೆಡ್ ಆಫೀಸ್ : **ಕಲಕತ್ತಾ .... ಮದರಾಸು.**

ಲೋಕಲ್ ಏಜೆಂಟ್ಸ್ :

**ಆಲ್ ಇಂಡಿಯಾ ಸ್ಯೂಯಿಂಗ್ ಮೆಷೀನ್ ಕಂಪೆನಿ.**

ಚಿಕ್ಕಪೇಟೆ :: ಬೆಂಗಳೂರು – 2.

ಎಸ್. ಆರ್. & ಸನ್ಸ್, ಶಿವಮೊಗ್ಗ.



# ಗಂಗಾ ನದಿಯ ಒಂದು ಸೂಕ್ಷ್ಮ ದೃಶ್ಯ

ವಿಶಾಲ ಮತ್ತು ವಿಸ್ಮಯಕರವಾದ ನಮ್ಮ ದೇಶದ ದೊಡ್ಡ ದೊಡ್ಡ ನದಿಗಳಲ್ಲೆಲ್ಲಾ ಗಂಗಾ ನದಿಯು ಅತಿ ದೊಡ್ಡದಾಗಿಯೂ ಅತ್ಯಂತ ಪ್ರಯೋಜನಕಾರಿಯೂ ಆಗಿದೆ.

ಹಿಮದಿಂದ ಆಚ್ಛಾದಿಸಲ್ಪಟ್ಟ ಹಿಮಾಲಯದಲ್ಲಿ ಗಂಗೆಯು ಉದ್ಭವಿಸುತ್ತದೆ. ಹಿಮಕರಗಿದ ನೀರಿನಿಂದ ತುಂಬಲ್ಪಟ್ಟು ಅದು ಅತಿ ಉನ್ನತ ಪ್ರದೇಶದಿಂದ ಕೆಳಗಡೆ ಹರಿಯುತ್ತದೆ. ಅದರ ಸುತ್ತಲೂ ಪ್ರಶಾಂತತೆಯೂ ರಮಣೀಯತೆಯೂ ನೆಲೆಗೊಂಡಿದೆ.

ಇನ್ನೂ ಕೆಳಗಿನ ಬಯಲಿನಲ್ಲಂತೂ ಗಂಗೆಯು ಎಂದೂ ಹೊಳೆಯಂತೆ ಇರುವುದಿಲ್ಲ. ಅದು ಒಂದು ಪ್ರಚಂಡ ನದಿಯೂ — ಅವಿಶ್ರಾಂತ ಜಲಮಾರ್ಗವೂ — ಆಗಿ ಪರಿಣಮಿಸಿ ಸಾವಕಾಶವಾಗಿ ಸಮುದ್ರವನ್ನು ಸೇರುತ್ತದೆ. ಅದರ ದಡಗಳು ಘಟ್ಟ ಮತ್ತು ಧಕ್ಕೆಗಳಿಂದ ತುಂಬಿವೆ. ದೋಣಿಗಳು ಜನರನ್ನೂ ಸಾಮಾನುಗಳನ್ನೂ ಹೊತ್ತುಕೊಂಡು ಒಂದು ದಡದಿಂದ ಇನ್ನೊಂದು ದಡಕ್ಕೆ ಓಡಾಡುತ್ತಿರುತ್ತವೆ. ಮತ್ತು ಅನೇಕ ಸಲ ಆ ಸಾಮಾನುಗಳ ಪೈಕಿ "ಬ್ರೂಕ್ ಬಾಂಡ್ ಟೀ" ಮಾರ್ಕಿನ ಚಹ ಪೆಟ್ಟಿಗೆಗಳನ್ನು ಕಾಣಬಹುದು. ಸರಿ, ದೇಶದ ಪ್ರತಿಯೊಂದು ಭಾಗದಂತೆ ಗಂಗಾಬಯಲಿನ ಜನರೂ ಸಹ ಬ್ರೂಕ್ ಬಾಂಡ್ ಚಹವನ್ನು ಇಚ್ಛಿಸುತ್ತಾರೆ. ಅದೇ ಚಹವನ್ನು ದಡದಲ್ಲಿರುವ ಹೋಟೆಲ್‌ಗಳೂ ಅಂಗಡಿಗಳೂ ಪ್ರಯಾಣಿಕರಿಗೆ ಒದಗಿಸುತ್ತವೆ; ಮತ್ತು ಅಂಬಿಗರು ತಮ್ಮ ಕೆಲಸವನ್ನು ಪ್ರಾರಂಭಿಸುವ ಮೊದಲು ಮತ್ತು ಸೂರ್ಯಾಸ್ತಮದ ಸಮಯದಲ್ಲಿ ತಮ್ಮ ದಿವಸದ ಕೆಲಸವೆಲ್ಲಾ ಮುಗಿದನಂತರ ಕೂಡ ಆ ಚಹವನ್ನೇ ಕುಡಿಯುತ್ತಾರೆ.

ಗಂಗಾ ಬಯಲು ಗಂಗೆಯ ಒಂದು ವರಪ್ರಧಾನವಾಗಿದೆ. ನದಿಯು ಮೇಲಿನಿಂದ ಮೆಕ್ಕಲು ಮಣ್ಣನ್ನು ತಂದು ತಗ್ಗು ಪ್ರದೇಶದಲ್ಲೆಲ್ಲಾ ಹರಡಿಸಿ ಅದನ್ನು ಫಲವತ್ತಾಗಿ ಮಾಡುತ್ತದೆ. ಆ ಮೆದುವಾದ ಮತ್ತು ಫಲವತ್ತಾದ ಭೂಮಿಯು ಅನೇಕ ತರಹದ ಬೆಳೆಗಳನ್ನು ಹೆಚ್ಚು ಹೆಚ್ಚಾಗಿ ಕೊಟ್ಟು ಲಕ್ಷಾಂತರ ಜನರಿಗೆ ಆಹಾರವನ್ನು ಒದಗಿಸುತ್ತದೆ. ಈ ಗಂಗಾ ಬಯಲನ್ನು ಭಾರತದ ಉಗ್ರಾಣವೆಂದು ಕರೆಯುವುದರಲ್ಲೇನೂ ಆಶ್ಚರ್ಯವಿಲ್ಲ. ಅಂತೆಯೇ, ಗಂಗಾ ನದಿಯು ಭೂಮಿಯನ್ನು ಫಲವತ್ತಾಗಿ ಮಾಡುವುದರಲ್ಲಿ ಹೇಗೆ ನಿರತವಾಗಿದೆಯೋ ಹಾಗೆ ಬ್ರೂಕ್ ಬಾಂಡ್ ಚಹವು ತನ್ನ ಜನರಿಗೆ ಸತತ ತಾಜಾ ಮತ್ತು ಉತ್ತಮವಾಗಿರುವ ಒಳ್ಳೆಯ ಉಲ್ಲಾಸವನ್ನೀಯುವ ಚಹವನ್ನು ಕೊಡುತ್ತದೆ.

ಬ್ರೂಕ್ ಬಾಂಡ್ ಇಂಡಿಯಾ ಪ್ರೈವೇಟ್ ಲಿಮಿಟೆಡ್

BB 235

# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

ನಾವು ತಪ್ಪು ದಾರಿಯಲ್ಲಿ ನಡೆಯುವೆವೆಂದು ಗೊತ್ತಾದಮೇಲೆ, ಕೂಡಲೇ ಅದನ್ನು ಬಿಟ್ಟುಬಿಡಬೇಕು. ಗೊತ್ತಿದ್ದೂ ಅದೇ ದಾರಿಯಲ್ಲಿ ಸಾಗಿದರೆ ಅದೇ ಒಂದು ಅಭ್ಯಾಸವಾಗುತ್ತದೆ; ಮತ್ತೆ ಹಿಂದಿರುಗಲು ಸಾಧ್ಯವಾಗುವುದಿಲ್ಲ. ಹಾಗೆಯೇ ಇಂದು ಮಾಡುವ ಕಾರ್ಯವನ್ನು ನಾಳೆಗಿರಿಸಿದರೂ ಅದೂ ನಡೆಯುವುದಿಲ್ಲ. ಈ ಸಂಚಿಕೆಯಲ್ಲಿರುವ 'ಬೇತಾಳ ಕಥೆ' ಈ ನೀತಿಗಳಿಗೊಂದು ಒಳ್ಳೆಯ ಉದಾಹರಣೆಯಾಗಿರುವುದನ್ನು ನೀವು ಕಾಣಬಹುದು.

ಸಂಪುಟ ೨೦] ಜೂನ್ ೧೯೬೮ [ಸಂಚಿಕೆ ೬



# ಮು ಖ ಚಿ ತ್ರ

ಉತ್ತರಾಭಿಮನ್ಯುಗಳ ವಿವಾಹವು ಮುಗಿಯಿತು. ಮದುವೆಗೆ ಬಂದಿದ್ದ ಹಿರಿಯರೆಲ್ಲಾ ಸಭಾಭವನದಲ್ಲಿ ಕೂಡಿದರು. ವಿರಾಟ, ದ್ರುಪದ, ವಾಸುದೇವ ಮೊದಲಾದ ಹಿರಿಯರು ನಡುವೆ ಕುಳಿತರು. ಒಂದು ಬದಿಯಲ್ಲಿ ಪಾಂಡವರು, ಕೃಷ್ಣ, ಬಲರಾಮ, ಸಾತ್ಯಕಿ ಮೊದಲಾದವರು ಕುಳಿತರು.

ಸ್ವಲ್ಪಹೊತ್ತು ಇಷ್ಟಾಗೋಷ್ಠಿಯಾದಮೇಲೆ ಕೃಷ್ಣನು ಎದ್ದು, "ಪಾಂಡವರು ಕಪಟದ್ಯೂತದಿಂದ ಹನ್ನೆರಡುವರ್ಷ ಅರಣ್ಯವಾಸ, ಒಂದು ವರ್ಷ ಅಜ್ಞಾತವಾಸಗಳನ್ನು ಅನುಭವಿಸಿದ್ದಾಯಿತು. ಈಗ ಅವರ ರಾಜ್ಯವು ಅವರಿಗೆ ಬರಬೇಕಾಗಿದೆ. ಅತ್ತ ಕೌರವರಿಗೂ, ಇತ್ತ ಪಾಂಡವರಿಗೂ ನಷ್ಟವಾಗದಂತೆ ಧರ್ಮಸಮ್ಮತವಾಗಿ ಕೆಲಸವಾಗುವ ಉಪಾಯನೋಡಬೇಕು. ಯೋಚನೆಮಾಡಿರಿ. ದುರ್ಯೋಧನನು ಪಾಂಡವರಿಗೆ ಅರ್ಧಭಾಗ ಕೊಡದೆಹೋದರೆ ಯುದ್ಧವು ತಪ್ಪದು. ಅದರಲ್ಲಿ ಕೌರವರು ಅನಾವಶ್ಯಕ ಸತ್ತುಹೋದಾರು" ಎಂದ.

ಕೂಡಲೇ ಬಲರಾಮನೆದ್ದು, "ಹೌದು, ಯುದ್ಧವಿಲ್ಲದೆ ಪಾಂಡವರಿಗೆ ರಾಜ್ಯ ದೊರೆಯುವಂತೆ ಮಾಡಲು ದುರ್ಯೋಧನನ ಬಳಿಗೆ ಒಬ್ಬ ದೂತನನ್ನು ಕಳುಹಿಸಬೇಕು. ಆ ದೂತನು ಧೃತರಾಷ್ಟ್ರ, ಶಕುನಿ, ದುರ್ಯೋಧನಾದಿಗಳೊಂದಿಗೆ ಅತಿವಿನಯವಾಗಿ ಮಾತನಾಡಿ, ಅವರ ಅನುಗ್ರಹವನ್ನು ಪಡೆಯಬೇಕು" ಎಂದು ಹೇಳಿದನು.

ಇದನ್ನು ಕೇಳಿ ಸಾತ್ಯಕಿ ಸಿಟ್ಟಿನಿಂದ, "ಪಾಂಡವರ ದೂತನು ಹೋಗಿ ಕೌರವರಿಗೆ ಸಾಷ್ಟಾಂಗ ಪ್ರಣಾಮ ಮಾಡಬೇಕಾದ ಅಗತ್ಯವಿಲ್ಲ. ಧರ್ಮರಾಜನಿಗೆ ಕೌರವರು ಅರ್ಧ ರಾಜ್ಯವನ್ನು ಕೊಡದೇಹೋದ ಪಕ್ಷದಲ್ಲಿ ನಾವೆಲ್ಲಾ ಕೂಡಿ ಯುದ್ಧದಲ್ಲಿ ಅವರ ಸರ್ವನಾಶ ಮಾಡಬಲ್ಲೆವು" ಎಂದು ಗರ್ಜಿಸಿದ. ವೃದ್ಧನಾದ ದ್ರುಪದನು ಸಾತ್ಯಕಿಯ ಮಾತನ್ನೇ ಬಲಪಡಿಸಿದನು. "ನನ್ನ ಪುರೋಹಿತನು ಭೀಷ್ಮ, ದ್ರೋಣ, ಧೃತರಾಷ್ಟ್ರಾದಿಗಳನ್ನು ಚೆನ್ನಾಗಿ ಬಲ್ಲವನು. ಅವನನ್ನು ದೂತನಾಗಿ ಕಳುಹಿಸೋಣ. ಅಷ್ಟೇ ಅಲ್ಲ; ಧರ್ಮರಾಯನು ಮುಂದಾಗಿ ನಾನಾ ದೇಶಗಳಿಗೆ ದೂತರನ್ನು ಕಳುಹಿಸಿ, ಯುದ್ಧವೇ ಬಂದರೆ ಅವರೆಲ್ಲಾ ನಮ್ಮ ಪಕ್ಷದಲ್ಲಿರುವಂತೆ ವಿಜ್ಞಪ್ತಿಮಾಡಿಕೊಳ್ಳಬೇಕು" ಎಂದು ಸಲಹೆ ಹೇಳಿದ. ಈ ಸಲಹೆಯನ್ನು ಕೃಷ್ಣನು ಬಲಪಡಿಸಿದನು.

ತರುವಾಯ ಸಭೆಮುಗಿಯಿತು. ಕೃಷ್ಣ ಮೊದಲಾದವರೆಲ್ಲಾ ತಂತಮ್ಮ ಮನೆಗಳಿಗೆ ಹೋದರು. ದ್ರುಪದನು ತನ್ನ ಪುರೋಹಿತನಿಗೆ ಹೇಳಬೇಕಾದ ವಿಷಯಗಳನ್ನು ಹೇಳಿ ಧೃತರಾಷ್ಟ್ರನ ಕಡೆಗೆ ರಾಯಭಾರ ಕಳುಹಿಸಿದನು.



# ಮಿತ್ರಲಾಭ

ಒಮ್ಮೆಗೂ ದಾನವಾ
ಡದ ಗುಪ್ತಧನನು
ಬೇಸರದಿ ಬಡಿಸಿ, ಬರಿ
ಬಡತನಕಿಳಿದನು!
ಸೋಮಿಲಕ ನಡೆದನುಪ
ಭುಕ್ತನಿಹ ಮನೆಗೆ
ಆತ ಬಲುದಾತ; ಉಪ
ಚರಿಸಿದನತಿಥಿಗೆ.
ಸೋಮಿಲಕನಲ್ಲಿ ತೃ
ಪ್ತಿಯಲುಂಡು ಮಲಗೆ
ಕರ್ಮ, ಕರ್ತಗಳು ಕನ
ಸಿಲಿ ಮರಳಿ ತೊಳಗೆ
ಕೇಳಿಸಿತು ಕರ್ಮದೀ
ಮಾತು: "ಓ ಕರ್ತ!
ಮಾಡುವನು ಬಲುಖರ್ಚು;
ದಾತನುಪಭುಕ್ತ.
ತುಂಬಿರುವ ಹಾಗಿವಗೆ
ಧನವೀಯಬೇಕು.
ಸಾಕಷ್ಟು ಧನವ ಈ
ಮನೆಗೆ ನೀ ಹಾಕು!"
ಸೋಮಿಲಕ ಬೆಳಗೆದ್ದು
ನೋಡಲಾ ಮನೆಯೊಳ್,
ಭೂರಿಧನ ಸೇರಿಹುದ
ಕಂಡನತಿಶಯದೊಳ್!
ಅಂದುಕೊಂಡನು ಹೀಗೆ:
'ವ್ಯಯಕೆ ತಕ್ಕಂತೆ
ಹಣ ದೊರೆಯೆ ಸಾಲದೇ
ಅಧಿಕವೇಕಂತೆ?
ಮೂಟೆಹಣ ಹೇಗೊಮ್ಮೆ
ಓಟೆಯಾದೊಡನೇ
ಸೋರಿ ಹೋಗುವುದೆಲ್ಲ
ತಿಳಿಯಗೊಡದೇನೇ!
ಇರುವನಿತಕೇ ತೃಪ್ತಿ
ಗೊಂಡಿರಲು, ಧನವು
ಬರುತಲೇ ಇಹುದು ಆ
ಗುವ ಹಾಗೆ ವ್ಯಯವು!

ಮಾರಂಗ




ಹೀಗೆ ತಿಳಿವನುಗೊಂಡು
ತನ್ನೂರಿಗೆಯ್ದು,
ಹಾಯಾಗಿ ಬಾಳಿದನು
ತೃಪ್ತಿಯಲಿ ನೇಯ್ದು."

* * *

ಇಂತಾಮೆ, ಇಲಿ, ಕಾಗೆ
ಮಾತುಕಥೆಗಳಲಿ
ಕಾಲವನು ಕಳೆಯುತಿರೆ
ಸ್ನೇಹ ಭಾವದಲಿ
ಇರಲೊಂದು ದಿನ ಒಂದು
ಜಿಂಕೆ ಭೀತಿಯಲಿ
ಬೇಡನಟ್ಟಿಸಿ ಬರಲು,
ಓಡಿ ಬಂತಲ್ಲಿ.

ಮಿತ್ರಕೂಟವು ಕೇಳಿ
ತಿಳಿದದರ ಕತೆಯು,
ತಮ್ಮೊಳಗೆ ಬೆರೆಸಿ ಕಳೆ
ದುವು ಅದರ ವ್ಯಥೆಯು.
ಒಂದುದಿನ ಆ ಜಿಂಕೆ
ನಿಯತ ವೇಳೆಯಲಿ
ಹಿಂದಿರುಗದಿರೆ, ಮಿತ್ರ
ಗಣವು ಚಿಂತೆಯಲಿ
ಹುಡುಕಾಡೆ, ಒಂದುಕಡೆ
ಜಿಂಕೆ ಬಲೆಯಲ್ಲಿ
ಬಿದ್ದಿಹುದ ಕಾಗೆ ಕಂ
ಡಿತು ಬೇಗದಲ್ಲಿ!
ಕಾಗೆ ಜಿಂಕೆಗೆ ಧೈರ್ಯ
ಪೇಳಿ ವೇಗದಲಿ,
ಪೋಗಿ ಇಲಿಯನು ಹೊತ್ತು
ತಂದಿಳಿಸಿತಲ್ಲಿ.
"ಇಲಿಯೆ, ನೀನೀ ಬಲೆಯ
ಹರಿದು ಹಾಕೀಗ;
ಬೇಡ ಬರುತಿಹನದೋ,
ಹಾ! ಬೇಗಬೇಗ!"
ಎನಲು ಇಲಿ ಕಡಿತಗಳ
ಓಡಿಸಿತು ಬಲೆಗೆ!
ಬೇಡ ಓಡುತೆ ಬಂದು

ಸೇರ್ದನಾ ಕಡೆಗೆ.
ಜಿಂಕೆ ಜಂಗನೆ ಎದ್ದು
ಹಾರ್ಹೋಡಿ ಹೋಯ್ತು!
ಇಲಿ ಬಿಲವ ತೂರಿತ್ತು!
ಕಾಗೆ ಪಾರಾಯ್ತು!
ಪಾಪ! ಅಲ್ಲಿಗೆ ಬಂದ
ಆಮೆಯನೆ ಬೇಡ,
ಎತ್ತಿಕೊಂಡೊಯ್ದ! ಮುಂ
ದಿನ ಯುಕ್ತಿ ನೋಡಾ!
ದಾರಿಯಲಿ ಮಲಗಿತ್ತು
ಜಿಂಕೆ ಸತ್ತಂತೆ!
ಕಾಗೆ ಕುಳಿತಿತ್ತದರ
ಕಣ್ ಕುಟುಕುವಂತೆ!
ಕೊಳದಬಳಿ ಈದೃಶ್ಯ
ವನು ಬೇಡ ನೋಡಿ,
"ಭಲೆ! ಜಿಂಕೆ ಸತ್ತಿಹುದು!
ಇಲ್ಲಿ ಬಂದೋಡಿ!"
ಎಂದುಕೊಂಡಾಮೆಯನು
ಕೆಳಗಿರಿಸಿ, ಓಡಿ
ಜಿಂಕೆಯೆಡೆ ಸಾರಲದು
ಹಾರಿ ಹೋಯ್ತೋಡಿ!
ಮತ್ತೆ ಹಿಂದಿರುಗಲವ,
ಆಮೆ ಬೊಳಕೆಂದು
ಕೊಳಕೆ ಧುಮುಕಿತು! ಬೇಡ
ಮಿಡುಕಿದನು ನೊಂದು!
ಬೇಡ ಸಾಗಿದ ಮೇಲೆ
ಸಖಚತುಷ್ಟಯರು
ತಮ್ಮ ತಾಣವ ಸೇರಿ
ಸಂತೋಷಿಸಿದರು.

* * *

ಮಿತ್ರಲಾಭವ ಗಳಿಸ
ಲದಕೆ ಮಿಗಿಲಿಲ್ಲ!
ಒಳ್ಳೆ ಮಿತ್ರರ ಮೇಳ
ಕಿಂತ ಒಳಿತಿಲ್ಲ!

★ ಮಿತ್ರಲಾಭ ಮುಗಿಯಿತು ★






# ಗಡಸು ಹೆಂಡತಿ

ಒಂದೂರಿನಲ್ಲಿ ಒಬ್ಬ ಸಂಸಾರಿಯಿದ್ದನು. ಅವನ ಹೆಂಡತಿ ತುಂಬಾ ಗಡಸು. ಗಂಡ ಬಹಳ ಸಾಧು.

ಹೆಂಡತಿ ಮನೆಗೆ ಬಂದ ಹೊಸತರಲ್ಲಿ ಅವನು ಗಂಡಸರ ಕೆಲಸಕಾರ್ಯಗಳನ್ನು ಮಾಡುತ್ತಿದ್ದನು. ಆದರೆ ಕ್ರಮೇಣ ಹೆಂಗಸರ ಕೆಲಸಬೊಗಸೆಗಳು ಒಂದೊಂದಾಗಿ ಅವನ ಪಾಲಿಗೆ ಬಂದುವು. ಅವನ ಹೆಂಡತಿ ಹೊಲದ ಕೆಲಸದಲ್ಲಂತೂ ಸಹಾಯ ಮಾಡುತ್ತಿರಲಿಲ್ಲ. ಈಗ ಮನೆಯ ಕೆಲಸವನ್ನೂ ಆತನಿಗೇ ವಹಿಸಿದಳು. ಹಸುಗಳನ್ನು ಅವನು ನೋಡಿಕೊಳ್ಳಬೇಕು. ಮೇಕೆಗಳನ್ನು ಅವನೇ ಮೇಯಿಸಬೇಕು. ಮನೆಗೆ ನೀರು ತರುವುದು, ಕಸಗುಡಿಸುವುದು, ಬಟ್ಟೆ ಒಗೆಯುವುದು, ಒಲೆ ಹೊತ್ತಿಸುವುದು ಇವೇ ಮೊದಲಾದ ಕೆಲಸಗಳನ್ನು ಅವನು ಮಾಡಬೇಕಾಯಿತು.

ಇಷ್ಟು ಕಷ್ಟಪಟ್ಟು ಅಡ್ಡಚಾಕರಿ ಮಾಡುತ್ತಿದ್ದರೂ ಹೆಂಡತಿ ಸದಾ ಅವನನ್ನು ಹಳಿಯುವಳು. ಅವನು ಕೆಲಸ ಕಾರ್ಯದಲ್ಲಿ ಅತ್ತಿತ್ತ ಓಡಾಡುತ್ತಿದ್ದರೆ ಹೆಂಡತಿ ಒಂದುಕಡೆ ನಿಂತು ಅವನಿಗೆ ಕೇಳುವಂತೆ ದಪ್ಪಗಂಟಲಲ್ಲಿ "ನಿನ್ನಿಂದ ಯಾವ ಕೆಲಸವೂ ಆಗದು. ಯಾವುದು ಮೊದಲು ಮಾಡಬೇಕು, ಯಾವುದು ಆಮೇಲೆ ಮಾಡಬೇಕು ಎಂಬುದರ ಪರಿಜ್ಞಾನವಿಲ್ಲ. ನಾನು ಸಂಸಾರ ಮಾಡುವುದಾದರೂ ಹೇಗೆ?'' ಎಂದು ನೆರೆಮನೆಯವರಿಗೂ ಕೇಳಿಸುವಂತೆ ಕೂಗಾಡುವಳು.

ಹೆಂಡತಿ ಇಷ್ಟು ಗೋಳಾಡಿಸುತ್ತಿದ್ದರೂ ಆ ಮನುಷ್ಯ ಸಮ್ಮನಿರುತ್ತಿದ್ದನು. ಎಲ್ಲರೂ ತನ್ನನ್ನು ನೋಡಿ ನಗುತ್ತಿರುವ ವಿಷಯ ಅವನಿಗೆ ತಿಳಿದಿತ್ತು. ಅವನು ಅವರಿಗೆ "ನಗುವಿರೇಕೆ? ನಕ್ಕರೆ ನಿಮ್ಮ ಹಲ್ಲು ಕಾಣುತ್ತದೆ, ಅಷ್ಟೇ'' ಎಂದು ಹೇಳುತ್ತಿದ್ದ.

ಒಂದು ದಿನ ಆ ಬಜಾರಿ ಗಂಡನನ್ನು ಕುರಿತು "ಅಯ್ಯೊ, ಹಾಲು ಒಡೆದು ಹೋಯಿತು. ನೀನು ಯಾವ ಕೆಲಸ ಸರಿಯಾಗಿ ಮಾಡಿದ್ದೀಯಾ?'' ಎಂದು ನಿಷ್ಠೂರವಾಗಿ ನುಡಿದಳು.

ಪಿ. ವೆಂಕಪ್ಪ



ಗಂಡ ಆಶ್ಚರ್ಯದಿಂದ "ಹಾಲು ಒಡೆದು ಹೋದುದು ನನ್ನ ತಪ್ಪೇ?" ಎಂದು ಕೇಳಿದ.

"ಹಾಲಿನ ಮಡಕೆ ನೀನು ಸರಿಯಾಗಿ ತೊಳೆದಿದ್ದರೆ ಹಾಗೇಕೆ ಆಗುತಿತ್ತು?" ಎಂದು ಅವಳು ಅಬ್ಬರಿಸಿದಳು.

"ಹಾಲಿನ ಮಡಕೆಯನ್ನೂ ನಾನೇ ಬೆಳಗ ಬೇಕೆಂದು ನನಗೆ ತಿಳಿದಿರಲಿಲ್ಲ. ಇದೇತಾನೇ ಹೇಳುತ್ತಿರುವೆ!" ಎಂದ ಗಂಡ.

"ಎಷ್ಟು ಕೆಲಸವೆಂತಾ ನಾನು ನೋಡಿ ಕೊಳ್ಳಲಿ? ಗಂಡುದಿಕ್ಕು ಅಂತಿರುವಾಗ ನನಗೆ ನಿನ್ನ ನೆರವು ಬೇಡವೇ?" ಎಂದಳು.

"ಅದೆಲ್ಲಾ ನನಗೆ ತಿಳಿಯದು. ನಾನು ಮಾಡಬೇಕಾದ ಕೆಲಸಗಳ ಪಟ್ಟಿಯೊಂದು ಬರೆದುಕೊಡು. ಇದೆಲ್ಲಾ ಬಾಯಿಮಾತಿನಿಂದ ಆಗತಕ್ಕ ವ್ಯವಹಾರವಲ್ಲ" ಎಂದ ಗಂಡ.

ಅವನು ಬರೆದುಕೊಳ್ಳುತ್ತಿದ್ದರೆ ಹೆಂಡತಿ ಅವನು ಮಾಡಬೇಕಾದ ಕೆಲಸಗಳನ್ನೆಲ್ಲಾ ಹೇಳಲಾರಂಭಿಸಿದಳು. ಆ ಪಟ್ಟಿ ಹನುಮಂತನ ಬಾಲದಂತೆ ಬೆಳೆಯಿತು.

ಕೆಲವು ದಿನಗಳಾದುವು. ಸಂಕ್ರಾಂತಿ ಬಂತು. ಹಬ್ಬದ ಹಿಂದಿನದಿನ ಹೆಂಡತಿ ತಮ್ಮ ಮನೆಯಬಳಿಯಿದ್ದ ಕೆರೆಗೆ ಒಗೆಯಲು ಒಂದು ರಾಸಿ ಬಟ್ಟೆ ತೆಗೆದುಕೊಂಡು ಹೋದಳು. ಗಂಡ ಬಟ್ಟೆಗಳನ್ನು ಒಗೆದು, ಹಿಂಡಿಕೊಡು ತ್ತಿದ್ದರೆ ಅವಳು ಅವುಗಳನ್ನು ಒಣಗಹಾಕು ತ್ತಿದ್ದಳು. ಆದರೆ ಈ ಕೆಲಸ ಮಾಡುತ್ತಿದ್ದಷ್ಟು ಹೊತ್ತೂ ಅವಳು ಒಂದೇಸವನೆ ಗಂಡನನ್ನು



ಬಯ್ಯುತ್ತಿದ್ದಳು. "ನಾಳೆ ಹಬ್ಬ. ಮಾಮೂಲು ಕೆಲಸಗಳೇ ಇನ್ನೂ ಮುಗಿದಿಲ್ಲ. ಇನ್ನು ಹಬ್ಬದ ಕೆಲಸಗಳೆಲ್ಲಿ ಆಗುತ್ತದೆ? ಪಟ್ಟಿ ಬರೆದುಕೊಂಡಮಾತ್ರಕ್ಕೆ ಬಂದ ಭಾಗ್ಯ ವಾದರೂ ಏನು? ನಿನ್ನಂತಹ ಹುಂಬನನ್ನು ನಾನೆಲ್ಲೂ ಕಂಡಿಲ್ಲ, ಕೇಳಿಲ್ಲ. ನಮ್ಮ ತಾಯಿ ಎಂದೋ ಹೇಳಿದ್ದಳು..."

ಅವಳ ಮಾತು ಮುಗಿಯುವಮೊದಲೇ ಒಂದು ಪ್ರಮಾದ ಸಂಭವಿಸಿತು. ಅವಳ ಗಂಡ ಹಿಂಡಿಕೊಟ್ಟ ಬಟ್ಟೆಯನ್ನು ತೆಗೆದುಕೊಳ್ಳಲು ದಡದಲ್ಲಿದ್ದ ಇಳಿಜಾರಾದ ಕಲ್ಲಿನಮೇಲೆ ಕಾಲಿಟ್ಟಳು. ಬಯ್ಯುವ ಉದ್ರೇಕದಲ್ಲಿ ಅದನ್ನು ಗಮನಿಸಲಿಲ್ಲ. ಕಾಲಿಟ್ಟ ತಕ್ಷಣ ಕಾಲು ಜಾರಿ ದುಡುಮ್ಮನೆ ಕೆರೆಯಲ್ಲಿ ಬಿದ್ದಳು.

"ಮುಳುಗಿ ಸತ್ತುಹೋಗುತ್ತಿದ್ದೇನೆ. ನನ್ನನ್ನು ಮೇಲಕ್ಕೆ ಎಳೆದುಕೊ" ಎಂದು ಕಿರಿಚಿಕೊಂಡಳು ಹೆಂಡತಿ.

"ನೀರೇನೂ ಬಹಳ ಆಳವಿಲ್ಲ. ಭಯಪಡ ಬೇಡ" ಎಂದ ಗಂಡ ಯಾವುದೇ ವಿಧವಾದ ಉದ್ರೇಕವನ್ನು ತೋರದೆ.

"ಚಳಿಗೆ ಮೈಯೆಲ್ಲಾ ಬಿರುಸಾಗುತ್ತಿದೆ. ಬೇಗ ನನ್ನನ್ನು ಎಳೆದುಕೋ" ಎಂದಳು ಹೆಂಡತಿ, ಚಳಿಯಿಂದ ನಡುಗುತ್ತಾ.

"ಅದು ಹೇಗೆ ಆಗುತ್ತದೆ. ನಾನು ಮಾಡ ಬೇಕಾದ ಕೆಲಸಗಳು ಅನೇಕವಿವೆ. ಈ ಕೆಲಸ ಪಟ್ಟಿಯಲ್ಲಿಲ್ಲ" ಎಂದ ಗಂಡ ನಿರ್ಲಿಪ್ತನಾಗಿ.

"ಮೊದಲು ನನ್ನನ್ನು ಮೇಲಕ್ಕೆ ಎಳೆ ದುಕೊ, ದಮ್ಮಯ್ಯಾ. ಅಯ್ಯಯ್ಯೋ ಜಿಗುಣೆ ಗಳು" ಎಂದು ಹೆಂಡತಿ ಕಿರಚಿಕೊಂಡಳು.

"ನಾವು ಮಾಡಿಕೊಂಡ ಏರ್ಪಾಟು ಆಗಲೇ ಮರೆತೆಯಾ? ಬೇಕಾದರೆ ಮನೆಗೆ ಹೋಗಿ ಪಟ್ಟಿ ತಂದು ಓದಿ ತೋರಿಸುತ್ತೇನೆ" ಎಂದು ಗಂಡ ಮನೆಗೆ ಹೋಗಿ ಪಟ್ಟಿ ತಂದು ಓದಲು ಮೊದಲುಮಾಡಿದನು.

ಹೆಂಡತಿ ಚಳಿಯಿಂದಲೂ, ಜಿಗುಣೆಗಳ ಭಯದಿಂದಲೂ ನಡುಗುತ್ತಾ, ದೈನ್ಯದಿಂದ "ಅಯ್ಯೋ, ನಿಮ್ಮ ದಮ್ಮಯ್ಯ. ನಾನು ಸಾಯುತ್ತಿದ್ದೇನೆ, ಹಾಳಾಗಲಿ ಪಟ್ಟಿ. ಅದನ್ನು ಹರಿದು ಚೆಲ್ಲಿ. ನನ್ನನ್ನು ಕೂಡಲೇ ಹೊರ ಗೆಳೆದುಕೊಳ್ಳಿ, ಪುಣ್ಯಬರುತದೆ" ಎಂದು ಕಣ್ಣೀರಿಟ್ಟಳು.

"ಒಳ್ಳೇಮಾತಂದೆ. ಈ ಪಟ್ಟಿಯೊಂದಿಗೆ ನಮಗಿನ್ನು ಕೆಲಸವಿಲ್ಲವಷ್ಟೇ. ಇನ್ನುಮುಂದೆ ನೀನು ಸ್ತ್ರೀಯರ ಕೆಲಸಗಳನ್ನುಮಾಡು, ನಾನು ಪುರುಷರ ಕೆಲಸಕಾರ್ಯಗಳಕಡೆಗೆ ಗಮನ ಕೊಡುತ್ತೇನೆ. ಹೇಳು ಹಾಗಾದರೆ ಒಪ್ಪಿಗೆ ತಾನೆ?" ಎಂದ ಗಂಡ.

ಹೆಂಡತಿ ಈ ವ್ಯವಸ್ಥೆಗೆ ಒಪ್ಪಿಕೊಂಡಳು. ಅವಳನ್ನು ಕೆರೆಯಿಂದ ಹೊರಗೆಳೆದು ಮನೆಗೆ ಕರೆದುಕೊಂಡು ಹೋಗಿ ಉಪಚಾರ ಮಾಡಿದ ಗಂಡ. ಅಂದಿನಿಂದ ಅವಳು ಗಂಡನನ್ನು ಬಯ್ಯುವುದನ್ನೂ ತನ್ನ ಕೆಲಸಗಳನ್ನು ಅವನಿಗೆ ಹೇಳುವುದನ್ನೂ ನಿಲ್ಲಿಸಿದಳು. ಮತ್ತೆ ಅವರ ಸಂಸಾರವು ಸುಗಮವಾಯಿತು.






## 17

[ಪದ್ಮಪಾದನು ಪಿಂಗಳನಿಗೆ ದರೋಡೆಕಾರರು ವರ್ತಕರ ಗುಂಪನ್ನು ಬಂಧಿಸಿದ ಗುಹೆಯನ್ನು ತೋರಿಸಿದನು. ಹಸನ್‌ಗೋರಿ ತನ್ನ ಭಟರೊಂದಿಗೆ ಹೋಗಿ ವರ್ತಕರನ್ನು ಬಂಧನದಿಂದ ಬಿಡುಗಡೆಮಾಡಿದನು. ತರುವಾಯ ಪಿಂಗಳನ ಕೋರಿಕೆಯಂತೆ ಪದ್ಮಪಾದನು ತನ್ನ ಮಂತ್ರಶಕ್ತಿಯಿಂದ, ತೋಳ ಮತ್ತು ಹುಲಿಗಳನ್ನು ಸೃಷ್ಟಿಸಿ, ಅವುಗಳ ಸಹಾಯದಿಂದ ದರೋಡೆಕಾರರನ್ನು ತಾನಿದ್ದ ಸ್ಥಳಕ್ಕೆ ಬರುವಂತೆ ಮಾಡಿದನು. ತರುವಾಯ—]

ಪ್ರಾಣಭಯದಿಂದ ಚೀರಿಡುತ್ತಾ ತಾವಿದ್ದ ಸ್ಥಳಕ್ಕೆ ಬಂದ ದರೋಡೆಕಾರರನ್ನು ಕಂಡು ಹಸನ್‌ಗೋರಿ ವಿಜಯಗರ್ವದಿಂದ ನಕ್ಕನು. ಅನೇಕ ವರ್ಷಗಳಿಂದ ಆ ಪ್ರಾಂತದಲ್ಲಿ ಪ್ರಯಾಣಮಾಡುವ ವರ್ತಕರನ್ನು ಸುಲಿಗೆ ಮಾಡಿ ಜೀವಿಸುತ್ತಿದ್ದ ಪುಂಡರು ಅಷ್ಟು ಸುಲಭವಾಗಿ ತನ್ನ ಕೈಗೆ ಸಿಕ್ಕುವರೆಂದು ಆತನು ಊಹಿಸಿರಲಿಲ್ಲ. ಈ ವಿಜಯಕ್ಕೆ ಕಾರಣನು ಪದ್ಮಪಾದನಾದರೂ, ನವಾಬನು ತನಗೆ ಖಂಡಿತ ಸನ್ಮಾನಮಾಡುವನೆಂದು ಹಸನ್ ಗೋರಿ ನಂಬಿದ್ದನು. "ಪದ್ಮಪಾದ, ನಿಮ್ಮ ಶಕ್ತಿ ಅಸಮಾನವಾದುದು. ಈ ಕ್ರೂರಕರ್ಮಿಗಳನ್ನು ಹಿಡಿಯಲು ನಾನು ಅನೇಕ ವರ್ಷಗಳಿಂದ ಪ್ರಯತ್ನಿಸುತ್ತಿದ್ದೆ. ಇಂದು ನಿಮ್ಮ ಸಹಾಯ, ಸಹಕಾರಗಳಿಂದ ಅದು ಸಾಧ್ಯವಾಯಿತು. ಇನ್ನುಮುಂದೆ ಈ ಮರುಭೂಮಿಯಲ್ಲಿ ಓಡಾಡುವ ವರ್ತಕರಿಗೆ, ಯಾತ್ರಿಕರಿಗೆ ಯಾವ ಅಪಾಯವೂ ಇರಲಾರದು. ನಿಮ್ಮ ಉಪಕಾರವನ್ನು ಮರೆಯುವಂತಿಲ್ಲ. ನಿಮ್ಮ ಸಹಾಯಕ್ಕೆ ನಾನು ತುಂಬಾ ಕೃತಜ್ಞ



ನಾಗಿದ್ದೇನೆ" ಎಂದ ಹಸನ್‌ಗೋರಿ. ಪದ್ಮಪಾದನು ಕಿರುನಗೆಬೀರಿ "ಹಸನ್, ನಾನು ಮಾಡಬೇಕಾದ ಕರ್ತವ್ಯವನ್ನು ಮಾಡಿದೆ. ಇನ್ನು ಈ ದುರುಳರ ವಿಚಾರಣೆ ನಡೆಸಿ ಶಿಕ್ಷಿಸಬೇಕಾದವನು ನೀನು. ನನ್ನ ಹುಲಿಗಳನ್ನು, ತೋಳಗಳನ್ನು ಹಿಂದಕ್ಕೆ ಕರೆದುಕೊಳ್ಳುತ್ತೇನೆ" ಎಂದು ಹೇಳಿ ತನ್ನ ಕೈಗಳನ್ನು ಮೇಲೆತ್ತಿ ಮಂತ್ರವನ್ನು ಜಪಿಸಿದನು. ಮರುಕ್ಷಣವೇ ತೋಳ ಮತ್ತು ಹುಲಿಗಳು ಮಾಯವಾದುವು. ಪದ್ಮಪಾದನು ತನ್ನ ಕೈಗೆ ಬಂದ ಕಲ್ಲುಚೂರುಗಳನ್ನು ಹಸನ್‌ಗೋರಿ ಮತ್ತು ಪಿಂಗಳರಿಗೆ ತೋರಿಸುತ್ತಾ "ಇವೇ ಹುಲಿ ಮತ್ತು ತೋಳಗಳು" ಎಂದು ಹೇಳಿ, ಅವನ್ನು ದೂರವೆಸೆದನು.

ಹಸನ್‌ಗೋರಿ ಆಜ್ಞಾಪಿಸಿದ ಕೂಡಲೇ ಆತನ ಭಟರು ಮೊದಲು ರಣಹದ್ದಿಗೆ ಸಂಕೋಲೆ ತೊಡಿಸಿ, ನಂತರ ಅವನ ಅನುಚರರನ್ನೆಲ್ಲಾ ಹಗ್ಗದಿಂದ ಬಿಗಿದುಕಟ್ಟಿದರು. ಆಗ ಪದ್ಮಪಾದನು ಪಿಂಗಳನನ್ನು ಒಂದು ಪಕ್ಕಕ್ಕೆ ಕರೆದುಕೊಂಡು ಹೋಗಿ "ಪಿಂಗಳಾ, ನಿನಗೆ ಕೂಡಲೇ ಅವಂತಿನಗರಕ್ಕೆ ಹಿಂತಿರುಗುವ ಆಶೆಯಿದೆಯೇ?" ಎಂದು ಕೇಳಿದನು.

"ಹೌದು, ಪದ್ಮಪಾದ. ಕಿಡಿಗೇಡಿಗಳಾದ ನನ್ನ ಸಹೋದರರು ನನ್ನನ್ನು ಹಡಗಿನ ಸರಂಗಿಗೆ ಮಾರಿದನಂತರ ನಮ್ಮ ತಾಯಿಗೂ ಹಿಂಸೆಕೊಟ್ಟಿರುತ್ತಾರೆ. ಹಿಂದೊಮ್ಮೆ ಅವರು ಹಾಗೆ ಮಾಡಿದ್ದರು. ಅವರಿಗೆ ಹೆತ್ತ ತಾಯಿಯ ಮೇಲೂ ಪ್ರೀತಿಯಿಲ್ಲ" ಎಂದ ಪಿಂಗಳ.





"ನೀನು ಭಲ್ಲೂಕಕೇತನನ್ನು ಆವಾಹನ ಮಾಡುವ ಮಂತ್ರವನ್ನು ಮರೆತುದೇ ಇಷ್ಟೆಲ್ಲಾ ಕಷ್ಟಗಳಿಗೆ ಕಾರಣ. ಆ ಮಂತ್ರವನ್ನು ಮತ್ತೆ ಹೇಳುವೆನು. ಈಸಾರಿಯಾದರೂ ಕಂಠಪಾಠ ಮಾಡಿಕೊಳ್ಳುವುದು ಕ್ಷೇಮಕರ" ಎಂದು ಪದ್ಮಪಾದನು ಪಿಂಗಳನಿಗೆ ಮತ್ತೆ ಆ ಮಂತ್ರವನ್ನು ಹೇಳಿದನು.

ತನ್ನ ಕೈಬೆರಳಲ್ಲಿದ್ದ ಉಂಗುರವನ್ನು ತೆಗೆದು ಪಿಂಗಳನಿಗೆ ಕೊಡುತ್ತಾ "ಇದೋ, ನನ್ನ ಉಂಗುರ. ಇದನ್ನು ಜೋಪಾನವಾಗಿಟ್ಟುಕೋ. ನಿನಗೆ ಎಂದಾದರೂ ನನ್ನನ್ನು ನೋಡುವ ಇಚ್ಛೆಯುಂಟಾದರೆ ಮನಸ್ಸಿನಲ್ಲಿ ನನ್ನನ್ನೊಮ್ಮೆ ನೆನೆದು, ಉಂಗುರವನ್ನು ತಾಕಿದಕೂಡಲೇ ನಾನು ನಿನ್ನಬಳಿಗೆ ಬರುತ್ತೇನೆ" ಎಂದ.

"ಪದ್ಮಪಾದ, ನಿನ್ನ ಸಹಾಯವನ್ನು ನಾನೆಂದಿಗೂ ಮರೆಯಲಾರೆ. ನಿನ್ನ ನೆರವಿನಿಂದ ನಾನು ನನ್ನ ಮಾತೆಯನ್ನು ನೋಡಲಿದ್ದೇನೆ. ನೀನು ನನ್ನ ಸಂಗಡ ಅವಂತಿನಗರಕ್ಕೆ ಬರಬಾರದೇಕೆ? ನಿನ್ನನ್ನು ಕಂಡು ನಮ್ಮ ತಾಯಿ ಹರ್ಷಿತಳಾಗುವಳು" ಎಂದ ಪಿಂಗಳ.

ಪಿಂಗಳನಕಡೆ ವಾತ್ಸಲ್ಯದಿಂದ ನೋಡುತ್ತಾ "ಪಿಂಗಳಾ, ನೀನು ಮಾಡಿದ ಸಹಾಯವನ್ನಾದರೂ ನಾನು ಹೇಗೆ ಮರೆಯಲಿ? ನಿನ್ನ ಸಹಾಯದಿಂದಲೇ ಅಲ್ಲವೇ ನಾನು ಮಹಾಮಾಯನನ್ನು ಜಯಿಸಲು ಸಾಧ್ಯವಾಯಿತು. ಎಂದಾದರೊಂದು ದಿನ ನಿಮ್ಮ ಮನೆಗೆ ಬಂದು ನಿಮ್ಮ ತಾಯಿಯ ದರ್ಶನ ಪಡೆಯುವೆನು. ನಾನೀಗ ಈ ವರ್ತಕರೊಂದಿಗೆ ಹೋಗು







ವಂತಿಲ್ಲ. ಒಬ್ಬೊಂಟಿಗನಾಗಿ ತೀರ್ಥಯಾತ್ರೆ ಮಾಡುವೆನು. ನಾನಿನ್ನು ಹೊರಡಲೇ?'' ಎಂದು ಹೇಳಿ ಪದ್ಮಪಾದನು ಅದೃಶ್ಯನಾದನು.

ಪಿಂಗಳನು ಹಸನ್‌ಗೋರಿಯ ಬಳಿಗೆ ಹೋಗಿ ತಾನು ಸ್ವದೇಶಕ್ಕೆ ಹೊರಡುವುದಾಗಿ ಹೇಳಿದನು. ಅದನ್ನು ಕೇಳಿ ಹಸನ್ ವಿಸ್ಮಿತನಾಗಿ "ಪಿಂಗಳಾ, ನೀನು ಹೇಳುತ್ತಿರುವುದಾದರು ಏನು? ಪಕ್ಕದ ಊರಿಗೆ ಹೋಗುತ್ತಿರುವಷ್ಟು ಹಗುರವಾಗಿ ಹೇಳುತ್ತಿರುವೆ? ನಿನ್ನ ದೇಶ ಇಲ್ಲಿಂದ ಎಷ್ಟು ಸಾವಿರ ಮೈಲು ದೂರವಿದೆಯೋ ನಿನಗೆ ತಿಳಿದಿದೆಯೇ?'' ಎಂದು ಕೇಳಿದನು.

ಪಿಂಗಳನು ನಸುನಕ್ಕು "ಹಸನ್, ನಿನಗೆ ನನ್ನ ಶಕ್ತಿಸಾಮರ್ಥ್ಯಗಳು ತಿಳಿಯವು. ಅಲ್ಲಿ ಕಾಣಿಸುತ್ತಿರುವ ಬಂಡೆಯಮರೆಗೆ ನನ್ನೊಂದಿಗೆ ಬಾ. ನಿನಗೊಬ್ಬ ಅದ್ಭುತ ವ್ಯಕ್ತಿಯನ್ನು ತೋರಿಸುವೆನು. ನಿನ್ನ ಸೈನಿಕರು, ಈ ಕಳ್ಳರು ಆತನನ್ನು ನೋಡುವುದು ಒಳಿತಲ್ಲ'' ಎಂದು ಒಂದು ಬಂಡೆಯಮರೆಗೆ ದಾರಿಹಿಡಿದನು.

ಪಿಂಗಳನು ಮಂತ್ರವನ್ನು ಜಪಿಸಿದಕೂಡಲೇ ಭಲ್ಲೂಕಕೇತನು ಅವನಮುಂದೆ ಅಂಜಲೀಬದ್ಧನಾಗಿ ಪ್ರತ್ಯಕ್ಷವಾಗಿ "ಪ್ರಭೂ, ಏನಪ್ಪಣೆ. ಬಹಳಕಾಲ ಈ ಸೇವಕನನ್ನು ಮರೆತೇಬಿಟ್ಟದ್ದಿರಿ'' ಎಂದನು.

ಭಲ್ಲೂಕಕೇತನ ಭೀಕರಾಕೃತಿಯನ್ನು ಕಂಡಕೂಡಲೇ ಹಸನ್‌ಗೋರಿ ಕಿಟಾರನೆ ಕಿರಿಚಿ ಅಲ್ಲಿಂದ ಓಡಲೆತ್ನಿಸಿದನು. ಆಗ ಪಿಂಗಳನು ಆತನ ಕೈಹಿಡಿದೆಳೆದು "ಹಸನ್, ನೀನು ಭಯಪಡಬೇಕಾಗಿಲ್ಲ. ಈ ಭಲ್ಲೂಕಕೇತನು ನನ್ನ ಸೇವಕನು'' ಎಂದನು.

"ಈ ರಕ್ಕಸನು ನಿನ್ನ ಸೇವಕನೇ?'' ವಿಸ್ಮಯದಿಂದ ಕೇಳಿದ ಹಸನ್‌ಗೋರಿ.

ಹೌದೆಂದು ತಲೆಯಾಡಿಸಿ, ಪಿಂಗಳನು ಭಲ್ಲೂಕಕೇತನ ಭುಜವನ್ನೇರಿ "ಹಸನ್ ಸಾಬ್, ನಾನಿನ್ನು ನನ್ನ ದೇಶಕ್ಕೆ ಹೋಗುತ್ತೇನೆ. ಹಸಿವು ಬಾಯಾರಿಕೆಗಳಿಂದ ತೊಳಲಾಡುತ್ತಿದ್ದ ನನ್ನನ್ನು ಕಾಪಾಡಿದೆ. ನಿನಗೆ ನಾನು ಚಿರಋಣಿ'' ಎಂದು ಹೇಳಿ, ಭಲ್ಲೂಕಕೇತನನ್ನು ಕುರಿತು "ಭಲ್ಲೂಕ, ನನ್ನನ್ನು ಅವಂತಿನಗರದಲ್ಲಿರುವ ನನ್ನ ಮನೆಗೆ ಸೇರಿಸು'' ಎಂದು ಆಜ್ಞಾಪಿಸಿದನು.



ಭಲ್ಲೂಕಕೇತನು ಸಿಂಹನಾದಮಾಡಿ ಆಕಾಶಕ್ಕೆ ಹಾರಿ ಬೆಟ್ಟಗುಡ್ಡ, ಸಮುದ್ರಸಾಗರಗಳನ್ನು ದಾಟಿ, ಸಂಜೆಯ ಸಮಯಕ್ಕೆ ಪಿಂಗಳನನ್ನು ಅವಂತಿನಗರದಲ್ಲಿದ್ದ ಅವನ ಮನೆಯ ಬಳಿ ಇಳಿಸಿದನು.

ಶಿಥಿಲಾವಸ್ಥೆಯಲ್ಲಿದ್ದ ತನ್ನ ಮನೆಯನ್ನು ಕಂಡು ಪಿಂಗಳನಿಗೆ ತುಂಬಾ ಖೇದವಾಯಿತು. ಇನ್ನು ತನ್ನ ತಾಯಿಯ ಸ್ಥಿತಿ ಹೇಗಿರುವುದೋ ಎಂದು ಆತಂಕಪಟ್ಟನು. ಮನೆಯ ಬಾಗಿಲನ್ನು ಸಮೀಪಿಸಿದಕೂಡಲೇ, ಸೊರಗಿ ಸುಕ್ಕಾಗಿ ನೀರಸಳಾಗಿದ್ದ ತಾಯಿ ಕಾಣಿಸಿದಳು. ಪಿಂಗಳನು ಉಕ್ಕಿಬರುತ್ತಿದ್ದ ದುಃಖವನ್ನು ತಡೆದುಕೊಂಡು, ಧಾವಿಸಿಹೋಗಿ "ಅಮ್ಮಾ" ಎಂದು ತಾಯಿಯನ್ನು ಅಪ್ಪಿಕೊಂಡನು.

ತಾಯಿ ಒಂದು ಕ್ಷಣ ನಿಬ್ಬೆರಗಾದಳು. ನಂತರ ತನ್ನ ಮಗನನ್ನು ಗುರುತಿಸಿ "ಮಗು, ಪಿಂಗಳಾ, ಬಂದೆಯಾ? ನಾನೆಷ್ಟು ಭಾಗ್ಯಶಾಲಿ" ಎಂದು ಕಣ್ಣೀರು ಮಿಡಿದಳು. ಪಿಂಗಳನು ಸಮಾಧಾನಪಡಿಸುತ್ತಾ "ಅಮ್ಮಾ, ನಮಗೆ ಇನ್ನು ಯಾವ ತೊಂದರೆಯೂ ಇರಲಾರದು. ಎಲ್ಲಿ ನನ್ನ ಆ ದುಷ್ಟ ಸಹೋದರರು?" ಎಂದು ಕೇಳಿದನು.

"ಮಗು, ಅವರು ನಿನಗೆ ಮಾಡಿದ ದ್ರೋಹಕ್ಕೆ ಶಿಕ್ಷೆ ಅನುಭವಿಸುತ್ತಿದ್ದಾರೆ. ಅವರಿಬ್ಬರನ್ನೂ ರಾಜನು ಸೆರೆಮನೆಯಲ್ಲಿಟ್ಟಿದ್ದಾನೆ" ಎಂದಳು. "ಹಾಗಾದರೆ ಅಮ್ಮಾ, ನೀನಿಷ್ಟು ದೈನ್ಯಾವಸ್ಥೆಯಲ್ಲಿರಲು ಕಾರಣ




ವೇನು? ನಾನು ಬಿಟ್ಟುಹೋಗಿದ್ದ ಧನ, ಮಹಿಮೆಯುಳ್ಳ ಚೀಲವಿತ್ತಲ್ಲ? ಅದೆಲ್ಲಾ ಏನಾದುವು?" ಎಂದು ಕೇಳಿದ ಪಿಂಗಳ.

ಉಮ್ಮಳಿಸಿಕೊಂಡು ಬರುತ್ತಿದ್ದ ದುಃಖವನ್ನು ನುಂಗಿಕೊಂಡು ಆಕೆ ಪಿಂಗಳನು ಸರಂಗಿನೊಂದಿಗೆ ಹೋದನಂತರ ನಡೆದ ಸಂಗತಿಯನ್ನೆಲ್ಲಾ ಆತನಿಗೆ ತಿಳಿಸಿದಳು.

ಪಿಂಗಳನು ಕೋಪದಿಂದ ಕುದಿದನು. "ಅಮ್ಮಾ, ಅವಂತಿನಗರದ ಅರಸನಿಗೆ ತಕ್ಕ ಪ್ರತೀಕಾರ ನಾನು ಮಾಡುತ್ತೇನೆ" ಎಂದು ಹೇಳಿ, ಭಲ್ಲೂಕಕೇತನನ್ನು ತನ್ನಬಳಿಗೆ ಬರಮಾಡಿಕೊಂಡನು.

"ಭಲ್ಲೂಕ, ಅವಂತಿನಗರದರಸನು ನನ್ನ ಸಹೋದರರನ್ನು ಬಂಧಿಸಿರುತ್ತಾನೆ. ಅವರನ್ನು



ತಕ್ಷಣ ಇಲ್ಲಿಗೆ ಕರೆದುಕೊಂಡು ಬರಬೇಕು. ಅಷ್ಟೇ ಅಲ್ಲ, ಅರಸನ ಭಂಡಾರದಲ್ಲಿರುವ ಯಾವತ್ತೂ ಧನವನ್ನು ನನ್ನಬಳಿಗೆ ತೆಗೆದು ಕೊಂಡು ಬಾ. ಮಹಿಮೆಯುಳ್ಳ ಚೀಲಸಹ ಆತನಬಳಿಯೇ ಇರುವುದು. ಅದನ್ನೂ ಹುಡುಕಿ ತೆಗೆದುಕೊಂಡು ಬರಬೇಕು" ಎಂದ ಪಿಂಗಳ.

"ಅಪ್ಪಣೆ ಮಹಾಪ್ರಭೂ" ಎಂದು ಭಲ್ಲೂಕಕೇತನು ಮಾಯವಾದನು. ಪಾತಾಳ ದಿಂದ ರಾಜಭವನವನ್ನು ಪ್ರವೇಶಿಸಿ, ಧನಾಗಾರ ದಲ್ಲಿದ್ದ ಹಣವನ್ನೂ, ಚೀಲವನ್ನೂ ತೆಗೆದು ಕೊಂಡು ಕಾರಾಗೃಹವನ್ನು ಪ್ರವೇಶಿಸಿದನು.

ಭಲ್ಲೂಕಕೇತನನ್ನು ಕಂಡಕೂಡಲೇ ಜೀವ ದತ್ತ, ಲಕ್ಷದತ್ತರು ಕಿಟಾರನೆಕಿರಿಚಿ ಮೂರ್ಛಿತ ರಾದರು. ಭಲ್ಲೂಕಕೇತನು ಅವರನ್ನು ಭುಜದ ಮೇಲೆ ಹಾಕಿಕೊಂಡು, ಪಿಂಗಳನಬಳಿಗೆ ಬಂದು "ಪ್ರಭೂ, ಇದೋ ಮಹಿಮಾನ್ವಿತ ಚೀಲ. ಇದೋ ರಾಜನ ಬೊಕ್ಕಸದಲ್ಲಿದ್ದ ಹಣವೆಲ್ಲಾ ತಂದಿದ್ದೇನೆ. ಇವರು ನಿಮ್ಮ ಸಹೋದರರು" ಎಂದು ಎಲ್ಲರನ್ನು ಪಿಂಗಳನ ಮುಂದಿರಿಸಿದನು. ಮೂರ್ಛಿತರಾಗಿದ್ದ ಮಕ್ಕಳನ್ನು ಕಂಡು ತಾಯಿಗೆ ಅವರಮೇಲೆ ವಾತ್ಸಲ್ಯಮೂಡಿತು. ಅವರು ತನಗೆ ಮಾಡಿದ ದ್ರೋಹವನ್ನು ಮರೆತಳು. ಕೂಡಲೇ ಒಳಗೆಹೋಗಿ ನೀರು ತಂದು ಅವರ ಮುಖದಮೇಲೆ ಚಿಮುಕಿಸಿದಳು. "ಮಕ್ಕಳೇ, ಮಕ್ಕಳೇ" ಎಂದು ಪ್ರೀತಿ ಯಿಂದ ಮಾತನಾಡಿಸಿದಳು. ಸ್ವಲ್ಪಹೊತ್ತಿನಲ್ಲಿ ಜೀವದತ್ತ ಲಕ್ಷದತ್ತರು ಕಣ್ಣು ತೆರೆದರು.




ತಮ್ಮ ಮುಂದೆ ತಾಯಿ ಮತ್ತು ತಮ್ಮ ಕಾಣಿ ಸಲು ಉಸಿರೇ ನಿಂತಂತಾಯಿತು. ಅವರು ಪಶ್ಚಾತಾಪದಿಂದ ದಗ್ಧರಾಗಿ "ಅಮ್ಮಾ, ಪಿಂಗಳಾ, ನೀವು ನನ್ನನ್ನು ಈಬಾರಿ ಕ್ಷಮಿಸಿ ಬಿಡಿ. ನಮಗೆ ಈಗ ಬುದ್ಧಿ ಬಂತು. ನಮ್ಮ ಪಾಪಗಳಿಗೆ ತಕ್ಕ ಶಿಕ್ಷೆಯಾಯಿತು" ಎಂದರು. ಅವರ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯುತ್ತಿತ್ತು.

ಅವರ ಅವಸ್ಥೆ ನೋಡಿ ಪಿಂಗಳನಿಗೆ ತುಂಬಾ ಮರುಕವಾಯಿತು. ಆದರೂ ಅವನು ಅವರ ಕಡೆ ಕೋಪದಿಂದ ನೋಡುತ್ತಾ, "ನಿಮ್ಮಂತಹ ನೀಚರು, ದ್ರೋಹಿಗಳು ಈ ಲೋಕದಲ್ಲೇ ಇರ ಲಾರರು. ಈ ಕ್ಷಣವೇ ನಿಮ್ಮಿಬ್ಬರನ್ನೂ ಜೀವಂತ ಹೂಳಿಸಿಬಿಡಬಲ್ಲೆ. ಆದರೆ ಅಮ್ಮನ



ಮುಖ ನೋಡಿ ಈಸಾರಿ ನಿಮ್ಮನ್ನು ಕ್ಷಮಿಸುತ್ತಿದ್ದೇನೆ. ಮತ್ತೊಮ್ಮೆ ನಮಗೇನಾದರೂ ದ್ರೋಹಬಗೆದರೆ ತುಂಡುತುಂಡು ಮಾಡಿ ಹದ್ದುಗಳಿಗೆ ಎರಚುತ್ತೇನೆ, ಹುಷಾರ್" ಎಂದನು.

"ನಮ್ಮನ್ನು ಕ್ಷಮಿಸಿಬಿಡು ತಮ್ಮ. ನಾವು ಇನ್ನೆಂದೂ ಹೀನಕೃತ್ಯಗಳಿಗೆ ಕೈಹಾಕುವುದಿಲ್ಲ" ಎಂದರು ಆ ಸಹೋದರರು.

ಪಿಂಗಳನು. ಮಹಿಮಾನ್ವಿತ ಚೀಲವನ್ನು ತೆಗೆದು ತಾಯಿಗೆ ಕೊಡುತ್ತಾ "ಅಮ್ಮಾ, ಹೊಟ್ಟೆಹಸಿವಾಗುತ್ತಿದೆ. ಊಟದ ವ್ಯವಸ್ಥೆ ಮಾಡು" ಎಂದನು. ನಂತರ ಭಲ್ಲೂಕಕೇತನ ಕಡೆ ತಿರುಗಿ "ಭಲ್ಲೂಕ, ನದಿತೀರದಲ್ಲಿರುವ ತೋಪಿನಲ್ಲಿ ಈ ರಾತ್ರಿ ಕಳೆದು, ನಾಳೆ ಸೂರ್ಯೋದಯವಾಗುವಷ್ಟರಲ್ಲಿ ನನ್ನ ಸ್ವಂತ ಉಪಯೋಗಕ್ಕಾಗಿ ಸುಂದರವಾದ ಒಂದು ಭವನವನ್ನು ನಿರ್ಮಿಸು. ಆ ಭವನ ಅವಂತಿ ನಗರದರಸನ ಅರಮನೆಯನ್ನು ಮೀರಿಸಿರಬೇಕು. ತಿಳಿಯಿತೆ?" ಎಂದನು.

"ಅಪ್ಪಣೆ, ಪ್ರಭು, ಭಲ್ಲೂಕಪರ್ವತದಲ್ಲಿ ನನ್ನ ನೆಂಟರಿಷ್ಟರಲ್ಲಿ ಅನೇಕಮಂದಿ ಪ್ರಸಿದ್ಧರಾದ ಶಿಲ್ಪಿಗಳಿರುವರು. ಒಂದು ಮಾತು ಹೇಳಿದರೆ ಅವರೆಲ್ಲ ಕ್ಷಣಮಾತ್ರದಲ್ಲಿ ಬಂದುಬಿಡುತ್ತಾರೆ. ಆ ಗುಂಪಿನವರ ಸಹಾಯದಿಂದ ಈಗಲೇ ಕೆಲಸ ಪ್ರಾರಂಭಿಸಲೇ?" ಎಂದು ಭಲ್ಲೂಕಕೇತನು ಕೇಳಿದ.

"ಹಗಲು ಹೊತ್ತಿನಲ್ಲಿ ನಿನ್ನ ರಾಕ್ಷಸಗಣ ಇಲ್ಲಿಗೆ ಬರುವುದು ಪ್ರಮಾದಕರ. ನಿಮ್ಮನ್ನು ಕಂಡನಂತರ ಈ ಅವಂತಿನಗರದಲ್ಲಿ ಒಂದು ಗುಬ್ಬಚ್ಚಿಯಿರಲೂ ಹೆದರುವುದು. ಪ್ರಜೆಗಳೆಲ್ಲ ನಗರವನ್ನು ಬಿಟ್ಟು ಹೋಗುವುದು ನನಗಿಷ್ಟವಿಲ್ಲ. ಎಲ್ಲರೂ ಹೆದರಿ ಓಡಿಹೋದಮೇಲೆ ನಾನೊಬ್ಬನೇ ಇದ್ದೇನು ಪ್ರಯೋಜನ? ಆದುದರಿಂದ ಕತ್ತಲಾದನಂತರ ಕೆಲಸ ಪ್ರಾರಂಭಿಸು" ಎಂದ ಪಿಂಗಳ.

"ಅಪ್ಪಣೆ, ಪ್ರಭು, ಈಗಲೇ ಭಲ್ಲೂಕ ಪರ್ವತಕ್ಕೆ ಹೋಗಿ, ನನ್ನ ಜನರಿಗೆ ಈ ವಿಷಯ ತಿಳಿಸಿ, ಸಂಜೆವೇಳೆಗೆ ಅವರನ್ನು ಕರೆದುಕೊಂಡು ಬಂದು ಕೆಲಸ ಪ್ರಾರಂಭಿಸುತ್ತೇನೆ" ಎಂದು ಹೇಳಿ ಭಲ್ಲೂಕಕೇತನು ಮಾಯವಾದನು. [ಇನ್ನೂ ಇದೆ]



# ಕೈಮೀರಿದ ಮೋಕ್ಷ

ಹಠಹಿಡಿದ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಶವವನ್ನು ಕೆಳಕ್ಕಿಳಿಸಿ ಭುಜದ ಮೇಲೆ ಹಾಕಿಕೊಂಡು ಶ್ಮಶಾನದತ್ತ ಮೌನವಾಗಿ ನಡೆಯತೊಡಗಿದನು.

ಆಗ ಶವದಲ್ಲಿದ್ದ ಬೇತಾಳ "ರಾಜನೇ, ನಾನು ಮಾಡುತ್ತಿರುವ ಈ ಕೆಲಸ ಒಳ್ಳೆಯದೋ ಅಲ್ಲವೋ ಎಂಬುದನ್ನು ಆಲೋಚಿಸುವುದು ಉತ್ತಮ. ಯಾಕೆಂದರೆ ಎಷ್ಟೇ ಧೀರ್ಘಾಯುಸ್ಸು ಇದ್ದರೂ ಒಳ್ಳೆಯ ಕೆಲಸ ಮಾಡಲು ಕೆಲವುವೇಳೆ ವ್ಯವಧಿ ಇರಲಾರದು. ಅಂಥ ಕೆಲಸಗಳನ್ನು ನೆನೆಸಿದಾಕ್ಷಣ ಮಾಡಿಬಿಡಬೇಕು. ಹಿಂದೆ ರತ್ನಪಾಲನೆಂಬ ರಾಜನು ಐವತ್ತು ವರ್ಷದ ಜೀವಾವಧಿಯಲ್ಲಿ ಒಂದಾದರೂ ಒಳ್ಳೆಯ ಕೆಲಸವನ್ನು ಮಾಡಲಾರದೆ ಹೋದನು. ನಿನಗೆ ಅವನ ಕಥೆ ಹೇಳುತ್ತೇನೆ, ಕೇಳು" ಎಂದು ಈ ರೀತಿ ಹೇಳಲಾರಂಭಿಸಿತು:

ಬಹಳಕಾಲದ ಹಿಂದೆ ಅಲಕಾಪುರಿ ಅಂತ ಒಂದು ರಾಜ್ಯವಿತ್ತು. ಅದರ ಅರಸ ರತ್ನಪಾಲ.

ಬೇತಾಳ ಕಥೆಗಳು

ಆತನಿಗೆ ಇಹಸುಖಗಳಮೇಲೆ ಮಮಕಾರ ಹೆಚ್ಚು. ಪರಲೋಕವನ್ನು ಕುರಿತು ಎಂದೂ ಚಿಂತಿಸಿದವನೇ ಅಲ್ಲ. ಪೂಜೆಪುನಸ್ಕಾರಗಳನ್ನು ಮಾಡುವವರನ್ನು ಕಂಡರೆ ಆತನಿಗೆ ತಾತ್ಸಾರ. ಬೇಟೆ, ಜೂಜಾಟ ಸಂಗೀತ ನೃತ್ಯ, ಸ್ತ್ರೀಯ ಕೂಡ ಸಲ್ಲಾಪ ಇವೇ ಮೊದಲಾದುವು ಆತನಿಗೆ ಪ್ರಿಯವಾಗಿದ್ದುವು.

ಒಂದುಸಾರಿ ಶಿವರಾತ್ರಿ ಬಂತು. ಅಂದು ಎಲ್ಲರೂ ಉಪವಾಸವಿರುವುದುಂಟು. ಜಾಗರಣೆಮಾಡುತ್ತಾರೆ. ದೇವಾಲಯಗಳಲ್ಲಿ ಶಿವನಿಗೆ ಅಭಿಷೇಕ, ಅರ್ಚನೆಗಳು ನಡೆಯುತ್ತಿವೆ. ಆದರೆ ರಾಜನಿಗೆ ಇವುಗಳಮೇಲೆ ತುಂಬಾ ಉಪೇಕ್ಷೆ. ಅದರಿಂದ ಆತನು ಅಂದು ಮುಂಜಾನೆ ತನ್ನ ಪರಿವಾರವನ್ನು ಸಂಗಡ ಕರೆದುಕೊಂಡು ಬೇಟೆಯಾಡಲು ಅರಣ್ಯಕ್ಕೆ ಹೊರಟನು. ರಾಜನ ಪರಿವಾರದಲ್ಲಿ ಅನೇಕರಿಗೆ ಆ ಪುಣ್ಯ ದಿನದಂದು ಬೇಟೆಯಾಡುವುದು ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ ಪ್ರತಿ ಹೇಳಲು ಯಾರಿಗೂ ಧೈರ್ಯವಿರಲಿಲ್ಲ. ಮರುಮಾತನಾಡದೆ ಎಲ್ಲರೂ ಬೇಟೆಗೆ ಹೊರಟರು. ಅವರು ಅರಣ್ಯವನ್ನು ಪ್ರವೇಶಿಸಿದ ಕೊಂಚಹೊತ್ತಿಗೆಲ್ಲಾ ಮೋಡಗಳು ಕವಿದು ಅರಣ್ಯವೆಲ್ಲಾ ಕತ್ತಲಾಯಿತು. ಕಿವಿಕಿವುಡಾಗುವಂತೆ ಗುಡುಗಿನ ಶಬ್ದದಿಂದ ಅರಣ್ಯವೆಲ್ಲಾ ಪ್ರತಿಧ್ವನಿಸಿತು. ಭೀಕರವಾದ ಗಾಳಿ ಬೀಸಲಾರಂಭಿಸಿತು.

ರಾಜನ ಹೊರತು ಉಳಿದವರಿಗೆಲ್ಲಾ ಭಯವಾಯಿತು. " ಈ ಪವಿತ್ರ ದಿನದಂದು ನಾವು ಬೇಟೆಗೆ ಹೊರಟೆವು. ದೇವರು ನಮ್ಮನ್ನು



ಶಿಕ್ಷಿಸುತ್ತಾನೆ?" ಎಂದುಕೊಂಡು ಒಬ್ಬೊಬ್ಬ ರಾಗಿ ಮೆಲ್ಲಮೆಲ್ಲ ಮರೆಯಾಗಿ ತಮ್ಮ ಮನೆಯ ದಾರಿ ಹಿಡಿದರು. ರಾಜನೊಬ್ಬನೇ ಉಳಿದನು. ರಾಜನು ದೂರದಲ್ಲೊಂದು ಜಿಂಕೆಯನ್ನು ಕಂಡು ತನ್ನ ಕುದುರೆಯನ್ನು ಅತ್ತಕಡೆ ಓಡಿಸಿದನು. ಜಿಂಕೆ ಓಡೋಡಿ ಎತ್ತಲೋ ಮಾಯವಾಯಿತು. ಗಾಳಿಯೊಂದಿಗೆ ಮಳೆ ಸಹ ಸುರಿಯಲಾರಂಭಿಸಿತು. ಅಲ್ಲಲ್ಲಿ ಸಿಡಿಲೆರಗುತಿತ್ತು. ರಾಜನಿಗೆ ಕೊಂಚ ದೂರದಲ್ಲಿ ಮರದಮೇಲೆ ಒಂದು ಸಿಡಿಲೆರಗಿ ಮರ ಇಬ್ಭಾಗವಾಯಿತು.

ಆ ಸಿಡಿಲನ್ನು ಕಂಡು ರಾಜನ ಕುದುರೆ ಬೆದರಿ ದಿಕ್ಕೆಟ್ಟು ಓಡಲಾರಂಭಿಸಿತು. ರಾಜನು ಅದನ್ನು ಹತೋಟಿಗೆ ತರಲು ಅಶಕ್ತನಾದನು. ಕುದುರೆ ಸಂಜೆಯವೇಳೆಗೆ ಅರಣ್ಯದಲ್ಲಿದ್ದ ಒಂದು ಪಾಳುದೇಗುಲದಬಳಿ ಬಂದು ನಿಂತಿತು. ಆ ದೇವಾಲಯದ ಸುತ್ತಲೂ ಎತ್ತರವಾದ ವೃಕ್ಷಗಳಿದ್ದುವು. ತನ್ನ ಕುದುರೆಯನ್ನು ಒಂದು ವೃಕ್ಷಕ್ಕೆ ಕಟ್ಟಿಹಾಕಿ, ರಾಜನು ಮಂಟಪದಲ್ಲಿದ್ದ ಒಂದು ಸ್ತಂಭಕ್ಕೆ ಆತುಕೊಂಡು ಗುಡಿಯಕಡೆ ನೋಡುತ್ತಾ ಕುಳಿತಿದ್ದನು. ಗುಡಿಯೊಳಕ್ಕೆ ಹೋಗಲು ಮನಸ್ಸಾಯಿತು. ಹಾಗೆ ಮಾಡಿದರೆ ದೇವರು ಎಲ್ಲಿ ಕೋಪಿಸಿಕೊಳ್ಳುವನೋ ಎಂದು ಹೆದರಿದನು. "ದೇವರು ಈಗಲೇ ನನ್ನಮೇಲೆ ಆಗ್ರಹಗೊಂಡಿದ್ದಾನೆ. ಇಂದು ನಾನು ಬೇಟೆಗೆ ಹೊರಟದ್ದು ಮೂಢತನ. ಅಂತಲೇ ದೇವರು ಗುಡುಗುಮಳೆಗಳನ್ನು ಕಳುಹಿಸಿದನು. ನನ್ನಿಂದ





ಬಾಗಿಲು ಹಾಕಿಕೊಂಡಿತು. ನಿರ್ಜನ ಪ್ರದೇಶದಲ್ಲಿ, ಅದರಲ್ಲೂ ಪಾಳುದೇಗುಲದಲ್ಲಿ ಅರ್ಚಕನಿರುವುದೆಂದರೇನು? ಇದ್ದಕ್ಕಿದ್ದಂತೆ ದೇವಾಲಯದ ದೀಪಗಳು ಉರಿಯಲಾರಂಭಿಸಿದುವು.

ಸ್ವಲ್ಪಹೊತ್ತಾದ ಬಳಿಕ ಮತ್ತೆ ಆ ಅರ್ಚಕನೇ ಬಾಗಿಲು ತೆರೆದುಕೊಂಡು ಹೊರಗೆ ಬಂದು ಅತ್ತಿತ್ತನೋಡಿ ಅಲ್ಲಿ ಯಾರೂ ಇಲ್ಲದಿರುವುದನ್ನು ಕಂಡು ನಿಡುಸುಯ್ದು ಒಳಕ್ಕೆ ಹೊರಟುಹೋದನು.

ಈಸಾರಿ ರಾಜನು ಅರ್ಚಕನನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದನು. ಆ ಅರ್ಚಕನು ಮಾನವನಲ್ಲವೆಂದೂ, ಭೂತವೆಂದೂ ರಾಜನಿಗೆ ತೋರಿತು. "ಯಾರೋ ಅರ್ಚಕನು ಸತ್ತುಹೋದರು ಸಹ ಈ ಆಲಯದಮೇಲಿನ ಮಮಕಾರವನ್ನು ಬಿಡಲಾರದೆ ಭೂತವಾಗಿ ದೇವರಿಗೆ ಸೇವೆಸಲ್ಲಿಸುತ್ತಿದ್ದಾನೆ. ಎಂಥ ಪುಣ್ಯಾತ್ಮ! ನಾನೆಂದೂ ದೇವರನ್ನು ನೆನೆಸಿದವನಲ್ಲ. ಇನ್ನು ಮೇಲಾದರೂ ನನ್ನ ಬಾಳನ್ನು ಭಗವಂತನ ಸೇವೆಗೆ ವಿನಿಯೋಗಿಸಬೇಕು" ಎಂದು ಯೋಚಿಸಿದ ರಾಜ. ಮೂರನೇಯಸಾರಿ ಅರ್ಚಕನು ಬಾಗಿಲು ತೆಗೆದು ಹೊರಗೆ ಬಂದ ಕೂಡಲೇ ರಾಜನು ಮಂಟಪದಿಂದೆದ್ದು ಅರ್ಚಕನನ್ನು ಸಮೀಪಿಸಿ "ಸ್ವಾಮಿ, ತಾವು ಯಾರು? ಇಲ್ಲೆಷ್ಟು ದಿನಗಳಿಂದ ಇರುವಿರಿ?" ಎಂದು ಕೇಳಿದನು.

ರಾಜನನ್ನು ಕಂಡಕೂಡಲೇ ಅರ್ಚಕನಿಗೆ ಆನಂದವಾಯಿತು. "ಯಾರೂ ಬರಲಿಲ್ಲವೆಂದು

ಉಪವಾಸ ಮಾಡಿಸಿದನು. ಈ ರಾತ್ರಿ ಜಾಗರಣೆ ಸಹ ಮಾಡಿಸುತ್ತಾನೆ" ಎಂದುಕೊಂಡ ರಾಜ.

ರಾಜನು ಮಳೆಯಲ್ಲಿ ನೆನೆದು ಒದ್ದೆಯಾಗಿದ್ದನು. ಇನ್ನೂ ಬಲವಾಗಿ ಗಾಳಿ ಬೀಸುತ್ತಲೇ ಇತ್ತು. ಮಳೆ ಸುರಿಯುತ್ತಲೇ ಇತ್ತು. ಎಷ್ಟೇ ಪ್ರಯತ್ನಪಟ್ಟರೂ ನಿದ್ರೆಬರದಾಯಿತು. ನಟ್ಟಡವಿಯಲ್ಲಿ ಪಾಳುದೇಗುಲವನ್ನು ನೋಡುತ್ತಾ, ಸ್ತಂಭಕ್ಕೆ ಒರಗಿಕೊಂಡು ಕುಳಿತಿದ್ದ ರಾಜನಿಗೆ ಆಶ್ಚರ್ಯಕರವಾದ ದೃಶ್ಯವೊಂದು ಕಾಣಿಸಿತು. ಅರ್ಧರಾತ್ರಿ ಸಮಯದಲ್ಲಿ ಆ ಗುಡಿಯಬಾಗಿಲು ತೆರೆಯಿತು. ಅರ್ಚಕನಂತಿದ್ದ ವ್ಯಕ್ತಿಯೊಂದು ಹೊರಗೆಬಂದು ಅತ್ತಿತ್ತ ನೋಡಿ, ಮತ್ತೆ ಒಳಗೆ ಹೋಗಿ

ಆತಂಕಗೊಂಡಿದ್ದೆ. ಒಳಗೆ ಬಾ ತಮ್ಮ. ನಾನು ನೂರು ವರ್ಷಗಳಿಂದ ಈ ಗುಡಿಯ ಅರ್ಚಕನಾಗಿದ್ದೇನೆ. ಕನಿಷ್ಠಪಕ್ಷ ಶಿವರಾತ್ರಿಯಂದಾದರೂ ಭಕ್ತಾದಿಗಳು ಗುಡಿಗೆ ಬರುವರೆಂದು ಭಾವಿಸಿದ್ದೆ. ಅನೇಕ ವರ್ಷಗಳನಂತರ ನೀನು ಬಂದೆ. ಈಶ್ವರನಿಗೆ ಅಭಿಷೇಕ ಮಾಡಿಸುವೆಯಾ?'' ಎಂದ ಅರ್ಚಕ.

"ಇಲ್ಲ, ನಾನೊಬ್ಬ ಪಾಪಾತ್ಮನು. ಈ ಸ್ಥಿತಿಯಲ್ಲಿ ನಾನು ಆಲಯವನ್ನು ಪ್ರವೇಶಿಸುವುದು ಉಚಿತವಲ್ಲ. ಆದರೂ ನನಗೆ ಈಶ್ವರ ಧ್ಯಾನಮಾಡಿ ಮುಕ್ತಿಪಡೆಯುವ ಯೋಚನೆಯಿದೆ. ತಮಗೆ ತಿಳಿದಿದ್ದರೆ ನನಗೊಂದು ವಿಷಯವನ್ನು ವಿವರಿಸಿ ಹೇಳುವಿರಾ?'' ಎಂದು ಕೇಳಿದ ರಾಜ.

"ನನಗೆ ತಿಳಿದಿದ್ದರೆ ಅಗತ್ಯವಾಗಿ ಹೇಳುತ್ತೇನೆ, ತಮ್ಮ'' ಎಂದ ಅರ್ಚಕ.

"ನಾನಿನ್ನೆಷ್ಟು ಕಾಲ ಜೀವಿಸಿರುತ್ತೇನೆ?'' ಎಂದು ಕೇಳಿದ ರಾಜ.

"ನೀನು ಇನ್ನು ಐವತ್ತು ವರ್ಷಕಾಲ ಬದುಕಿ ಬಾಳಿ, ಶಿವರಾತ್ರಿ ಪುಣ್ಯದಿನದಂದು ಅರ್ಧರಾತ್ರಿಹೊತ್ತಿಗೆ ಪ್ರಾಣತ್ಯಾಗಮಾಡುವೆ'' ಎಂದ ಅರ್ಚಕ.

ರಾಜನಿಗೆ ಪರಮಾನಂದವಾಯಿತು. ರಾಜನು ಅರ್ಚಕನ ಅನುಮತಿಪಡೆದು, ಮಂಟಪಕ್ಕೆ ಹಿಂತಿರುಗಿ ಬಂದು ಬೆಳಗಾಗುವತನಕ ನಿದ್ರೆಮಾಡಿ, ತರುವಾಯ ತನ್ನ ನಗರಕ್ಕೆ ಹೊರಟುಹೋದನು.



ರಾಜನು ಅರಮನೆಗೆ ಹಿಂತಿರುಗಿದ ಕೂಡಲೇ "ನನಗಿನ್ನೂ ಐವತ್ತುವರ್ಷ ಆಯುಸ್ಸಿದೆ. ಇದರಲ್ಲಿ ಇಪ್ಪತ್ತೈದುವರ್ಷ ಬೇಸರವಾಗುವಷ್ಟು ಸುಖಭೋಗಗಳನ್ನು ಅನುಭವಿಸಿ, ಉಳಿದ ಇಪ್ಪತ್ತೈದುವರ್ಷ ದೇವರ ಧ್ಯಾನ ಮಾಡಿ ಮುಕ್ತನಾಗುವೆನು'' ಎಂದುಕೊಂಡ.

ಹೀಗೆ ನಿರ್ಣಯಿಸಿಕೊಂಡನಂತರ ರಾಜನು ಮತ್ತಷ್ಟು ಹೆಚ್ಚು ಭೋಗಲಾಲಸೆಗಳಲ್ಲಿ ಮುಳುಗಿದನು. ಆ ಇಪ್ಪತ್ತೈದು ವರ್ಷಗಳು ಒಂದು ಕ್ಷಣದಂತೆ ಕಳೆದುಹೋದುವು.

ಈ ವಿಷಯ ತಿಳಿದು ರಾಜನಿಗೆ ಆಶ್ಚರ್ಯವಾಯಿತು. "ಎಲಾ, ಎಷ್ಟುಬೇಗ ಇಪ್ಪತ್ತೈದು ವರ್ಷ ಕಳೆದುಹೋಯಿತು. ಆದರೂ ನನಗಿನ್ನೂ ಭೋಗಲಾಲಸೆಗಳಲ್ಲಿ ವಿರಕ್ತಿಯುಂಟಾ

ಗಿಲ್ಲ. ಉಳಿದ ಇಪ್ಪತ್ತೈದು ವರ್ಷ ಈಶ್ವರನನ್ನು ತದೇಕಚಿತ್ತದಿಂದ ಧ್ಯಾನಮಾಡುವುದು ನನ್ನಿಂದ ಸಾಧ್ಯವಿಲ್ಲ. ಆದುದರಿಂದ ನಾನು ಇನ್ನೂ ಹದಿನೈದು ವರ್ಷ ಸುಖವನ್ನು ಅನುಭವಿಸಿ, ಉಳಿದ ಹತ್ತು ವರ್ಷ ಈಶ್ವರಚಿಂತೆಯಲ್ಲಿ ಕಳೆದು ಮೋಕ್ಷ ಸಂಪಾದಿಸುವೆನು'' ಎಂದುಕೊಂಡ.

ಆ ಹದಿನೈದು ವರ್ಷಗಳು ಸಹ ಕ್ಷಣದಂತೆ ಕಳೆದುಹೋದುವು. ರಾಜನಿಗೆ ಪ್ರಪಂಚದ ಸುಖದಮೇಲಿನ ಮೋಹ ಕಡಿಮೆಯಾಗಲಿಲ್ಲ. ನಿಶ್ಚಲಚಿತ್ತದಿಂದ ಮೂರು ವರ್ಷ ದೇವರನ್ನು ಪ್ರಾರ್ಥಿಸಿದರೆ ಸಾಲದೆ?'' ಎಂದುಕೊಂಡ.

ತನ್ನ ಆಯುಸ್ಸು ಇನ್ನು ಕೇವಲ ಮೂರು ವರ್ಷಗಳುಮಾತ್ರವಿದೆಯೆಂದು ತಿಳಿದ ಕೂಡಲೇ "ಒಂದು ವರ್ಷ ಸಾಲದೇ?'' ಎಂದುಕೊಂಡ ರಾಜ. ವರ್ಷ ಆರು ತಿಂಗಳುಗಳಾದುವು. ಆರು ತಿಂಗಳು ಮೂರು ತಿಂಗಳಿಗಿಳಿಯಿತು. ಕಡೆಗೆ ಮೂರು ದಿನಗಳುಳಿದುವು.

ರಾಜನಿಗೆ ಏನೋ ಒಂದುರೀತಿ ಸಂಕಟ, ಆವೇದನೆ. ಇನ್ನೂ ಆತನ ಮನಸ್ಸು ಭಗವಂತನಕಡೆ ಹರಿಯಲಿಲ್ಲ. "ನನ್ನ ಆಯುಸ್ಸು ಇನ್ನು ಕೇವಲ ಮೂರು ದಿನಗಳಿವೆ. ಆದರೆ ನಾನು ಏಕಾಗ್ರಚಿತ್ತದಿಂದ ಮೂರು ದಿನ ಈಶ್ವರಧ್ಯಾನ ಮಾಡಲಾರೆ. ಭಕ್ತಿಪೂರ್ವಕವಾಗಿ ಈಶ್ವರನನ್ನು ಕೇವಲ ಮೂರು ಗಂಟೆ ಧ್ಯಾನಮಾಡಿದರೂ ಮೋಕ್ಷಬರುತ್ತದೆ. ನನ್ನ ಜನ್ಮದ ಕೊನೆಯ ದಿನವಾದ ಶಿವರಾತ್ರಿಯಂದು ಈಶ್ವರಧ್ಯಾನದಲ್ಲಿ ಕಳೆಯುವೆನು.



ಆದರಿಂದ ನನ್ನ ಪಾಪಗಳೆಲ್ಲಾ ಪರಿಹಾರವಾಗುವುವು" ಎಂದುಕೊಂಡ ರಾಜ.

ಕೊನೆಯ ದಿನ ಬಂದೇ ಬಂತು. ಆದರೆ ಆತನಿಗೆ ಮೋಹಲಾಲಸೆಗಳಲ್ಲಿ ವಿರಕ್ತಿಯುಂಟಾಗಲಿಲ್ಲ. "ಏನಾದರೂ ಅನುಭವಿಸಬೇಕೆಂದರೆ ಇಂದೇ ಕಡೆಯದಿನ. ಸೂರ್ಯಾಸ್ತಮಯವಾಗುವವರೆಗೂ ನನಗಿಷ್ಟವಾದ ಸುಖಗಳನ್ನೆಲ್ಲಾ ಅನುಭವಿಸಿ ಆತರುವಾಯ ಈಶ್ವರಧ್ಯಾನವನ್ನು ಪ್ರಾರಂಭಿಸುವೆನು" ಎಂದುಕೊಂಡ ಆತ.

ಆತನು ಹಾಗೆಯೇ ಮಾಡಿದನು. ಸೂರ್ಯಾಸ್ತಮಯವೂ ಆಯಿತು. ರಾಜನ ಉದ್ವೇಗ ಹೆಚ್ಚಾಯಿತು. ಮಂತ್ರಿಯನ್ನು ಕರೆಯಿಸಿಕೊಂಡು "ಮಂತ್ರಿ, ಭಗವತ್ಸಂಕೀರ್ತನೆ ಮಾಡುವವರನ್ನು ಕರೆಯಿಸು. ನನಗೆ ಇನ್ನು ವ್ಯವಧಿಯಿಲ್ಲ. ಇಂದು ಅರ್ಧರಾತ್ರಿಗೆ ನನ್ನ ಆಯುಸ್ಸು ಮುಗಿಯುತ್ತದೆ. ಉಳಿದೆರಡು ಗಂಟೆಗಳ ಕಾಲವಾದರೂ ದೇವಧ್ಯಾನ ಮಾಡುತ್ತಾ ದೇಹವನ್ನು ತೊರೆದು ಕೈಲಾಸವನ್ನು ಸೇರಿಕೊಳ್ಳುವೆನು" ಎಂದನು.

"ಅದೆಂತಹ ಮಾತು ಮಹಾಪ್ರಭು! ತಾವಿನ್ನೂ ನೂರು ವರ್ಷ ಬಾಳುವಿರಿ" ಎಂದು ಹೇಳಿದ ಮಂತ್ರಿ ಲೋಕರೂಢಿಯಂತೆ.

"ಇಲ್ಲ, ನನ್ನ ಸಾವಿನ ವಿಷಯ ನನಗೆ ತಿಳಿದಿದೆ. ಈಗ ವ್ಯವಧಿಯಿಲ್ಲ. ಆದುದರಿಂದ ವ್ಯರ್ಥಾಲಾಪದಲ್ಲಿ ಕಾಲಕಳೆಯದೆ ಕೂಡಲೇ ಭಜನೆಮಂಡಲಿಯವರನ್ನು ಕರೆಯಿಸು," ಎಂದ ರಾಜ. ಆದರೆ ಭಜನೆಮಂಡಲಿಯವರು



ಬರುವಷ್ಟರಲ್ಲಿ ರಾಜನಿಗೆ ಬವಳಿ ಬಂತು. ಕಡೆಗೆ ಮೂರ್ಛೆಯಿಂದ ಆತನು ಚೇತರಿಸಿ ಕೊಳ್ಳಲೇ ಇಲ್ಲ. ಸರಿಯಾಗಿ ಅರ್ಧರಾತ್ರಿಗೆ ಆತನ ಪ್ರಾಣವಾಯು ಹಾರಿಹೋಯಿತು.

ಬೇತಾಳ ಈ ಕಥೆ ಹೇಳಿ "ರಾಜನೇ, ನನಗೊಂದು ಸಂದೇಹ. ರತ್ನಪಾಲನಿಗೆ ಐವತ್ತು ವರ್ಷ ಅವಧಿಯಿದ್ದರೂ ತನ್ನ ಮನಸ್ಸನ್ನು ಭಗವಂತನ ಎಡೆ ಹರಿಯಿಸಲು ಸಾಧ್ಯವಾಗಲಿಲ್ಲವೇಕೆ? ಆತನಿಗೆ ದೈವಚಿಂತೆ ಇಷ್ಟವಿರಲಿಲ್ಲವೇ? ಇಲ್ಲ ವಿಧಿ ಪ್ರತಿಕೂಲ ವಾಗಿತ್ತೇ? ಇದಕ್ಕೆ ಸಮಾಧಾನ ತಿಳಿದೂಸಹ ಹೇಳದಿದ್ದರೆ ನಿನ್ನ ತಲೆ ಸಾವಿರ ಹೋಳುಗ ಳಾದೀತು, ಹುಷಾರ್" ಎಂದಿತು.

ಅದಕ್ಕೆ ತ್ರಿವಿಕ್ರಮನು ಇಂತೆಂದನು: "ರತ್ನಪಾಲನಿಗೆ ದೇವರ ಧ್ಯಾನಮಾಡಿ ತನ್ನ ಪಾಪ ಪರಿಹಾರಮಾಡಿಕೊಂಡು, ಮೋಕ್ಷ ಸಾಧಿಸುವ ಆಶೆಯಿತ್ತು. ಆದರೆ ಆ ಕೋರಿಕೆ ನೆರವೇರದಿರಲು ಕಾರಣಭೂತನು ಆತನೇ ಎಂದು ಹೇಳಬಹುದು. ಯಾಕೆಂದರೆ ಆತನಿಗೆ ಪರಲೋಕದಲ್ಲಿ ಮೋಕ್ಷ ಸಾಧಿಸುವ ಕೋರಿಕೆ ಗಿಂತಲೂ, ಇಹಲೋಕದ ಭೋಗವನ್ನು ಅನುಭವಿಸುವ ಆಶೆ ಅಧಿಕವಾಗಿತ್ತು. ಈ ಎರಡು ಕೋರಿಕೆಗಳಿಗೂ ಸ್ಥಳವಿಲ್ಲವೆಂದು ಆತನು ಗ್ರಹಿಸಲಿಲ್ಲ. ಇಹಸುಖಗಳನ್ನು ಅನುಭ ವಿಸುತ್ತಿರಲು ಕ್ರಮೇಣ ಅದರಮೇಲಿನ ಗೀಳು ತೀರುವುದೆಂದು ಆತನು ಭ್ರಮೆಗೊಂಡಿದ್ದನು. ಇಹಸುಖಗಳು ಅಲೆಗಳಿದ್ದಂತೆ! ವ್ಯವಧಿ ಕೊಟ್ಟಷ್ಟೂ ಅಲ್ಪಮಾನವನನ್ನು ತನ್ನ ಕಡೆಗೆ ಸೆಳೆದುಕೊಳ್ಳುತ್ತವೆ. ಸ್ಥಿರಬುದ್ಧಿಯಿಂದ ಪರ ಮಾತ್ಮನನ್ನು ಕೇವಲ ಒಂದುಗಳಿಗೆ ಮನಃ ಪೂರ್ವಕವಾಗಿ ಸ್ಮರಿಸಿದರೂ ಸಾಕೆಂದು ಹೇಳುವ ಮಾತು ನಿಜವೇ ಆದರೂ, ಅಂಥ ಸ್ಥಿರಚಿತ್ತವನ್ನು ಹೊಂದಲು ಅನೇಕ ವರ್ಷ ಸಾಧನೆ ಅಗತ್ಯ. ರತ್ನಪಾಲನು ಅಂತಹ ಸಾಧನೆ ಮಾಡಲಿಲ್ಲ. ಅದೇ ಆತನು ಮಾಡಿದ ತಪ್ಪು. ಆದರಿಂದಲೇ ಆತನಿಗೆ ಐವತ್ತೂ ವರ್ಷಕಾಲ ದೇವರ ಧ್ಯಾನಕ್ಕೆ ವ್ಯವಧಿ ಸಾಕಾಗದಾಯಿತು."

ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳ ಮಾಯವಾಗಿ ಮರವನ್ನೇರಿತು.



# ವಿನಯಕುಮಾರಿ

ಹಿಂದೆ ಒಬ್ಬ ರಾಜನಿದ್ದ. ಅವನಿಗೆ ಪ್ರತಾಪನೆಂಬೊಬ್ಬ ಮಗನಿದ್ದ. ಪ್ರತಾಪ ಕುಮಾರನಿಗೆ ಮದುವೆಯಾಗುವ ವಯಸ್ಸು ಬಂದಿತ್ತು. ಆದರೆ ಆತನು ಯಾವ ರಾಜ ಕುಮಾರಿಯನ್ನೂ ಮದುವೆಯಾಗಲು ಒಪ್ಪಲಿಲ್ಲ. ಚತುರಮತಿಯಾದವಳನ್ನೇ ಮದುವೆಮಾಡಿಕೊಳ್ಳ ಬೇಕೆಂದಿದ್ದ.

ರಾಜನ ಆಸ್ಥಾನದಲ್ಲಿ ವೆಂಕೋಬನೆಂಬ ಸಾಮಾನ್ಯ ಸರದಾರನೊಬ್ಬನಿದ್ದ. ಆತನಿಗೆ ವಿನಯಕುಮಾರಿ ಎಂಬ ಮಗಳಿದ್ದಳು. ಅವಳು ಅತ್ಯಂತ ಚತುರಮತಿಯೆಂದು ಪ್ರತಾಪಕುಮಾರನು ಒಂದುಸಾರಿ ಅವಳ ಮುಖ ನೋಡುತ್ತಲೇ ಕಂಡು ಹಿಡಿದ. ತನ್ನ ತಂದೆಯೊಡನೆ ಗುಟ್ಟಾಗಿ ತನ್ನ ಬಯಕೆಯನ್ನು ತಿಳಿಸಿದ.

ಕೂಡಲೇ ಮಹಾರಾಜನು ವೆಂಕೋಬನನ್ನು ಕರೆದು, "ನಮಗೆ ನಿನ್ನಿಂದೊಂದು ಕೆಲಸವಾಗಬೇಕು. ಮೂರುದಿನ ಅವಧಿ ಕೊಟ್ಟಿದ್ದೇನೆ, ಹೋಗು. ಅನಂತರ ನೀನು ಈ ಸಭೆಗೆ ನಡೆದುಬಾರದೆ ಕಾಲಿನಿಂದ ಬರಬೇಕು. ಆಗ ನನಗೊಂದು ಬಹುಮಾನ ತಂದು ಕೊಟ್ಟರೂ ಅದು ನಿನ್ನಲ್ಲೇ ಇರಬೇಕು! ಈ ನಿಬಂಧನೆಗಳಿಗೆ ತಪ್ಪಿದರೆ ನಿನಗೆ ಗಡೀಪಾರು ಶಿಕ್ಷೆ!" ಎಂದು ಆಜ್ಞಾಪಿಸಿದ. ವೆಂಕೋಬ ಒಂದೂ ತಿಳಿಯದೆ, ಚಿಂತೆಯಿಂದ ಮನೆಗೆಹೋದ.

ಮೂರುದಿನಗಳಮೇಲೆ ರಾಜಸಭೆ ಕೂಡಿತು. ವೆಂಕೋಬ ಒಂದು ಆಮೆಯ ಮೇಲೆ ಕುಳಿತುಕೊಂಡು ತಾನೂ ಅದರೊಂದಿಗೆ ನಡೆಯುತ್ತಾ ಸಭೆಗೆ ಬಂದು ರಾಜನಿಗೆ ನಮಸ್ಕಾರಮಾಡಿದ.

"ನಡೆಯದೆ ಕುಳಿತು, ಕಾಲಿನಿಂದಲೇ ಬಂದೆ ಪ್ರಭು. ಇದೋ ತಮಗೆ ತಂದ ಬಹುಮಾನ!" ಎನ್ನುತ್ತಾ ವೆಂಕೋಬ ತನ್ನ ಸಂಚಿಯೊಳಗಿನಿಂದ ಒಂದು ಸುಂದರ ಗಿಳಿಯನ್ನೆತ್ತಿ ರಾಜನ ಕೈಗೆ ಹಾಕಿದ. ತತ್‌ಕ್ಷಣ ಆ ಗಿಳಿ 'ಕೀಕೀ' ಅನ್ನುತ್ತಾ ಹಾರಿ ಹೋಗಿ ವೆಂಕೋಬನ ಮನೆಯನ್ನೇ ಸೇರಿತು.

ರಾಜನು ಸಂತೋಷದಿಂದ, "ಚೆನ್ನಾಗಿದೆ. ಈ ಸಮಸ್ಯೆಯನ್ನು ಬಿಡಿಸಲು ಉಪಾಯ ಹೇಳಿದವರು ಯಾರು?" ಎಂದು ಕೇಳಿದ. "ನನ್ನ ಮಗಳು ವಿನಯ ಕುಮಾರಿ" ಎಂದ ವೆಂಕೋಬ.

ಮುಂದೇನಿದೆ? ಚತುರಮತಿಯಾದ ವಿನಯಕುಮಾರಿ ಪ್ರತಾಪಕುಮಾರನ ಪತ್ನಿಯಾಗಿ ಮೆರೆಯುವ ಭಾಗ್ಯವನ್ನು ಕಂಡಳು.

ಹೆಚ್. ಎಸ್. ಉಷ




## 9

[ಅದ್ಭುತ ದೀಪದ ಸಹಾಯದಿಂದ ರಾಜಕುಮಾರಿಯನ್ನು ವಿವಾಹವಾಗಿ, ಅದ್ಭುತವಾದ ಭವನದಲ್ಲಿ ಸುಖವಾಗಿ ಜೀವಿಸುತ್ತಿದ್ದ ಅಲ್ಲಾದೀನನಿಗೆ ಅನಿರೀಕ್ಷಿತವಾಗಿ ಸಂಕಷ್ಟ ಪ್ರಾಪ್ತವಾಯಿತು. ಅವನು ಬೇಟೆಗೆ ಹೋದ ಸಮಯದಲ್ಲಿ ಮೊರಾಕೊ ದೇಶದ ಮಾಂತ್ರಿಕನು ಬಂದು ಅಲ್ಲಾದೀನನ ಹೆಂಡತಿಗೆ ಹೊಸ ದೀಪವನ್ನು ಕೊಟ್ಟು ಅದ್ಭುತ ದೀಪವನ್ನು ಪಡೆದು, ಅದರ ಸಹಾಯದಿಂದ ಅಲ್ಲಾದೀನನ ಭವನದೊಂದಿಗೆ, ರಾಜಕುಮಾರಿಯನ್ನೂ ಸಹ ತನ್ನ ದೇಶಕ್ಕೆ ಎತ್ತಿಕೊಂಡು ಹೋದನು. ರಾಜನು ಅಲ್ಲಾದೀನನಮೇಲೆ ಕುಪಿತನಾಗಿ, ತನ್ನ ಮಗಳನ್ನು ನಲವತ್ತು ದಿನಗಳಲ್ಲಿ ತಂದು ತೋರಿಸದಿದ್ದರೆ ತಲೆ ತೆಗೆಯುವುದಾಗಿ ಬೆದರಿಸಿದನು. ಅಲ್ಲಾದೀನನು ಆ ನಗರವನ್ನು ತೊರೆದನು.]

ಅಲ್ಲಾದೀನನು ಚಿಂತಿಸುತ್ತಾ ಹೋಗುತ್ತಿರಲು ಒಂದು ನದಿ ಕಾಣಿಸಿತು. ಅವನಿಗೆ ಅದರಲ್ಲಿ ಹಾರಿ ಈ ಸಂಕಷ್ಟಗಳಿಂದ ಪಾರಾಗಬೇಕೆನಿಸಿತು. ಯಾಕೆಂದರೆ ಅವನು ತನ್ನ ಹೆಂಡತಿಯನ್ನು ತುಂಬಾ ಪ್ರೀತಿಸುತ್ತಿದ್ದನು. ಇನ್ನೀಗ ಆಕೆಗಾಗಿ ಎಲ್ಲೆಂದು ಹುಡುಕುತ್ತಾನೆ? ಆದರೆ ಮರುಕ್ಷಣವೇ ತನ್ನ ಯೋಚನೆ ತಪ್ಪೆನಿಸಿತು. ಭಗವಂತನ ಇಚ್ಛೆಗೆ ವಿರುದ್ಧವಾಗಿ ನಡೆಯಲು ತನಗೆ ಅಧಿಕಾರವಿಲ್ಲ. ಆತ್ಮಹತ್ಯೆ ಮಹಾಪಾತಕವೆಂದೂ ಹಿರಿಯರು ಹೇಳಿರುವರು.

ಅಲ್ಲಾದೀನನು ಆತ್ಮಹತ್ಯೆಯ ಪ್ರಯತ್ನವನ್ನು ತೊರೆದು, ಸ್ನಾನಮಾಡಿ ಮುಗಿಸಿದನು. ಅನಂತರ ಅನಿರೀಕ್ಷಿತವಾಗಿ ತನ್ನ ಬೆರಳಲ್ಲಿದ್ದ

ಎಸ್. ಪ್ರತಿಭಾಕುಮಾರಿ

ಉಂಗುರವನ್ನು ತಿಕ್ಕಿಕೊಳ್ಳಲು ಉಂಗುರದ ಭೂತ ಪ್ರತ್ಯಕ್ಷವಾಗಿ "ಏನಪ್ಪಣೆ, ಜೀಯಾ" ಎಂದು ಕೇಳಿತು. ಅಲ್ಲಾದೀನನು ಮೊದಲು ಬೆಚ್ಚಿಬಿದ್ದನು. ನಂತರ ಚೇತರಿಸಿಕೊಂಡು, ಮುಗುಳುನಗೆ ಬೀರುತ್ತಾ "ಎಲೈ, ಭೂತವೇ ನನ್ನ ಭವನವನ್ನೂ ಅದರಲ್ಲಿದ್ದ ನನ್ನ ಮಡದಿಯನ್ನೂ ಮತ್ತೆ ಮೊದಲಿದ್ದಕಡೆಗೆ ತರಿಸು, ನೋಡುವಾ" ಎಂದನು.

"ದೀಪದ ಭೂತವನ್ನು ಧಿಕ್ಕರಿಸಿ ನಾನು ಆ ಕೆಲಸ ಮಾಡಲು ಸಾಧ್ಯವಿಲ್ಲ, ಜೀಯಾ" ಎಂದಿತು ವಿನಯದಿಂದ ಆ ಭೂತ.

"ಕನಿಷ್ಟಪಕ್ಷ ನನ್ನನ್ನು ನನ್ನ ಹೆಂಡತಿಯಿರುವ ಮನೆಯಬಳಿಯಾದರೂ ಸೇರಿಸು" ಎಂದ ಅಲ್ಲಾದೀನ್. ಅಲ್ಲಾದೀನನು ಹಾಗೆ ಹೇಳಿದುದೇ ತಡ ಉಂಗುರದಭೂತ ಅವನನ್ನು ಮೊರಾಕೊ ದೇಶಕ್ಕೆ ಕರೆದುಕೊಂಡು ಹೋಗಿ ಅವನ ಭವನದ ಸನಿಯದಲ್ಲಿ ಇಳಿಸಿ ಮಾಯವಾಯಿತು.

ಸರಿಯಾಗಿ ಅದೇ ಸಮಯಕ್ಕೆ ದಾಸಿಯೊಬ್ಬಳು ಅಂತಃಪುರದ ಕಿಟಕಿ ತೆಗೆದು "ರಾಜಕುಮಾರಿ, ಈ ಸಂಜೆಬಿಸಿಲಿನಲ್ಲಿ ತೋಟ ಎಷ್ಟು ರಮ್ಯವಾಗಿ ಕಾಣುವುದೋ ನೋಡಿ ಬನ್ನಿ" ಎಂದು ರಾಜಕುಮಾರಿಯನ್ನು ಕೂಗಿ ಕರೆದಳು. ಕಿಟಕಿಯಿಂದ ಬಾಗಿ ನೋಡಲು ಅವಳಿಗೆ ಅಲ್ಲಾದೀನನು ಕಾಣಿಸಿದನು. ಅವಳು ಆನಂದದಿಂದ ಕೈತಟ್ಟುತ್ತಾ "ಅಮ್ಮಾ, ಯಜಮಾನರು ಬಂದಿದ್ದಾರೆ" ಎಂದು ಗಟ್ಟಿಯಾಗಿ ಅರಚಿದಳು. ಕೂಡಲೇ ರಾಜಕುಮಾರಿ ಅತ್ಯಾತುರದಿಂದ ಅಲ್ಲಿಗೆ ಧಾವಿಸಿಬಂದಳು. ಗಂಡಹೆಂಡಿರು ಪರಸ್ಪರ ನೋಡಿಕೊಂಡು ದಿಗ್ಭ್ರಮೆಗೊಂಡರು. ರಾಜಕುಮಾರಿ ತನ್ನ ಅಚ್ಚರಿಯನ್ನು ತಡೆಹಿಡಿದು "ಬನ್ನಿ, ಬೇಗ ಒಳಗೆ ಬನ್ನಿ, ಭಯಪಡಬೇಡಿ. ಮಾಂತ್ರಿಕನು ಎಲ್ಲಿಗೋ ಹೋಗಿದ್ದಾನೆ" ಎಂದಳು.




ದಾಸಿಯೊಬ್ಬಳು ಕೆಳಗಿಳಿದು ಹೋಗಿ ಅವನನ್ನು ರಹಸ್ಯ ದ್ವಾರದಿಂದ ಅಂತಃಪುರಕ್ಕೆ ಕರೆದುಕೊಂಡು ಬಂದಳು. ಅಲ್ಲಾದೀನನು ಪ್ರೀತಿಯಿಂದ ತನ್ನ ಪತ್ನಿಯನ್ನು ಅಪ್ಪಿಕೊಂಡನು. ಕೊಂಚಹೊತ್ತು ಮೌನವಾಗಿ ಅವರಿಬ್ಬರೂ ಆನಂದಬಾಷ್ಪಗಳನ್ನು ಸುರಿಸಿದರು. ಅಲ್ಲಾದೀನನು ತನ್ನ ಹೆಂಡತಿಯನ್ನು

ಕುರಿತು “ ಪ್ರಿಯೆ, ನಾನು ಬೇಟೆಗೆ ಹೋಗುವ ಮುನ್ನ ನನ್ನ ಕೋಣೆಯಲ್ಲಿ ಒಂದು ದೀಪ ವನ್ನು ಇಟ್ಟಿದ್ದೆ. ಅದು ಏನಾಯಿತು?” ಎಂದು ಪ್ರಶ್ನಿಸಿದನು.

“ಅದೇ ನಮ್ಮ ಸಂಸಾರ ಹಾಳುಮಾಡಿತು. ತಪ್ಪೆಲ್ಲಾ ನನ್ನದೇ ” ಎಂದು ರಾಜಕುಮಾರಿ ನಡೆದ ವಿಷಯವನ್ನೆಲ್ಲಾ ತಿಳಿಸಿ “ ಇಲ್ಲಿಗೆ ಬಂದ ನಂತರವೇ ಆ ಧೂರ್ತನು ನನಗೆ ಆ ದೀಪದ ಮಹಿಮೆಯನ್ನು ತಿಳಿಸಿದನು ” ಎಂದಳು.

“ಅವನಿಗೆ ನಿನ್ನಬಳಿ ಕೆಲಸವೇನು?” ಎಂದು ಅಲ್ಲಾದೀನನು ಕೋಪಮಿಶ್ರಿತವಾದ ಧ್ವನಿಯಲ್ಲಿ ಕೇಳಿದನು.

“ಪ್ರತಿದಿನಾ ನನ್ನಬಳಿಗೆ ಬಂದು ನನ್ನ ಮನಸ್ಸನ್ನು ತನ್ನೆಡೆಗೆ ಒಲಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಅವನು ನನ್ನೊಂದಿಗೆ ಅನೇಕ ವಿಷಯಗಳನ್ನು ಹೇಳಿದ್ದಾನೆ. ನಮ್ಮ ತಂದೆ ನಿಮ್ಮ ತಲೆಯನ್ನು ಕಡಿಸಿರುವನೆಂದು ಹೇಳಿದ. ನಿಮ್ಮ ತಂದೆ ಮುಸ್ತಫಾ ಎಂಬ ಬಡ ಚಿಪ್ಪಿಗನಂತೆ, ತನ್ನ ಕೃಪೆಯಿಂದಲೇ ನೀವು ಗಣ್ಯವ್ಯಕ್ತಿಗಳಾದಿರಂತೆ. ಆತನೆಷ್ಟು ಹೊತ್ತು ಕುಳಿತು ಹರಟೆಹೊಡೆಯುತ್ತಿದ್ದರೂ ನಾನುಮಾತ್ರ ಶಿಲಾವಿಗ್ರಹದಂತೆ ಕುಳಿತಿರುತ್ತೇನೆ. ಬೇಸರವಾಗಿ ಅವನಾಗಿ ಅವನು ಎದ್ದು ಹೊರಟುಬಿಡುತ್ತಾನೆ! ಆದರೆ ನನ್ನನ್ನೆಲ್ಲಿ ಬಲಕ್ಕಾರಮಾಡುವನೋ ಎಂದು ಸದಾ ನನಗೆ ಹೆದರಿಕೆ ಇರುತಿತ್ತು. ಸದ್ಯ ನೀವು ಬಂದಿರಿ ” ಎಂದಳು ರಾಜಕುಮಾರಿ. ಅಲ್ಲಾದೀನನು ಎಲ್ಲವನ್ನೂ ಶಾಂತಚಿತ್ತನಾಗಿ ಕೇಳಿ



"ಅವನು ಆ ದೀಪವನ್ನು ಎಲ್ಲಿ ಬಚ್ಚಿಟ್ಟಿರುವನೋ ನಿನಗೆ ತಿಳಿದಿದೆಯೋ?" ಎಂದನು.

"ಅದನ್ನು ಅವನು ಎಲ್ಲೂ ಬಚ್ಚಿಡುವುದಿಲ್ಲ. ತನ್ನ ಒಳಗಿನ ಅಂಗಿಯಲ್ಲಿಟ್ಟುಕೊಂಡೇ ತಿರುಗಾಡುತ್ತಾನೆ" ಎಂದಳು ರಾಜಕುಮಾರಿ.

"ಬಹಳ ಒಳ್ಳೆಯದಾಯಿತು. ಅವನ ವಿಷಯ ನಾನು ನಂತರ ಹೇಳುತ್ತೇನೆ. ನೀನು ಸ್ವಲ್ಪಹೊತ್ತು ಹೊರಗಿರು" ಎಂದು ತನ್ನ ಮಡದಿಗೆ ಹೇಳಿ ಅಲ್ಲಾದೀನನು ಆಕೆ ಹೊರಗೆ ಹೋದನಂತರ ತನ್ನ ಉಂಗುರವನ್ನು ಉಜ್ಜಿದನು. ಉಂಗುರದಭೂತ ಪ್ರತ್ಯಕ್ಷವಾಗಿ "ಏನಪ್ಪಣೆ" ಎಂದು ಕೇಳಿತು.

"ನಿನಗೆ ಅತಿಭಯಂಕರವಾದ ವಿಷವೇನಾದರೂ ತಿಳಿದಿದೆಯೋ?" ಎಂದು ಅಲ್ಲಾದೀನನು ಆ ಭೂತವನ್ನು ಕುರಿತು ಕೇಳಿದನು.

"ತಿಳಿದಿದೆ, ಪ್ರಭೂ" ಎಂದಿತು ಭೂತ.

"ಹಾಗಾದರೆ ಆನೆಯನ್ನೂ ಸಹ ಕ್ಷಣಮಾತ್ರದಲ್ಲಿ ಸಾಯಿಸುವಂತಹ ಕಾಲಕೂಟ ವಿಷವನ್ನು ತೆಗೆದುಕೊಂಡು ಬಾ" ಎಂದ ಅಲ್ಲಾದೀನ್. ಭೂತ ಅದೃಶ್ಯವಾಗಿ ಮರುಕ್ಷಣವೇ ಒಂದು ಪೊಟ್ಟಣ ತಂದುಕೊಟ್ಟಿತು.

ಭೂತವನ್ನು ಕಳುಹಿಸಿಕೊಟ್ಟನಂತರ ಅಲ್ಲಾದೀನನು ತನ್ನ ಪತ್ನಿಯನ್ನು ಕೂಗಿದನು. ಆಕೆಯ ಕೈಗೆ ಆ ಪೊಟ್ಟಣವನ್ನು ಕೊಟ್ಟು, ಮಾಂತ್ರಿಕನು ಅಂತಃಪುರಕ್ಕೆ ಬಂದಾಗ ಆಕೆ ಮಾಡಬೇಕಾದ ಕರ್ತವ್ಯವನ್ನು ತಿಳಿಸಿದನು. ತರುವಾಯ ಅವನು ಅಲ್ಲಿಯೇ ಒಂದು ಸ್ಥಳದಲ್ಲಿ ಅವಿತಿಟ್ಟುಕೊಂಡನು.





ಅಲ್ಲಾದೀನನು ತನಗೊಪ್ಪಿಸಿದ ಕಾರ್ಯ ರಾಜಕುಮಾರಿಗೆ ಕಡುತರವಾಗಿ ಕಂಡುಬಂತು. ಆದರೂ ತನ್ನ ಗಂಡನ ಸಲಹೆಯಂತೆ ಆಕೆ ತಲೆಬಾಚಿಕೊಂಡು ಹೂ ಮುಡಿದುಕೊಂಡಳು. ತನ್ನ ಸೀರೆಗಳಲ್ಲೆಲ್ಲಾ ಅತ್ಯುತ್ತಮವಾದುದನ್ನು ಆರಿಸಿ ಉಟ್ಟು ರತ್ನದದಾಬನ್ನು ಹಾಕಿಕೊಂಡಳು. ಕೊರಳಿಗೆ ಮುತ್ತಿನಸರ ಹಾಕಿಕೊಂಡಳು. ಕೈಕಾಲುಗಳಿಗೆ ರತ್ನಾಭರಣಗಳನ್ನು ತೊಟ್ಟುಕೊಂಡಳು. ಏಳು ವಿಧವಾದ ಅತ್ತರುಗಳನ್ನು ಲೇಪಿಸಿಕೊಂಡಳು. ದೇವಕನ್ಯೆಯಂತೆ ಹಂಸತೂಲಿಕಾತಲ್ಪದ ಮೇಲೆ ಮಲಗಿ ಮಾಂತ್ರಿಕನ ಆಗಮನವನ್ನು ನಿರೀಕ್ಷಿಸುತ್ತಿದ್ದಳು. ಮಾಂತ್ರಿಕನು ಮಾಮೂಲು ವೇಳೆಗೆ ಬಂದನು.

ರಾಜಕುಮಾರಿ ಮುಗುಳುನಗೆ ಬೀರುತ್ತಾ ಇದಿರುಬಂದು ಅವನಿಗೆ ಆದರದ ಸ್ವಾಗತ ನೀಡಿದಳು. ಅವಳ ಇಂದಿನ ವರ್ತನೆ ಕಂಡು ಮಾಂತ್ರಿಕನಿಗೆ ಅಚ್ಚರಿಯಾಯಿತು. ಆನಂದವೂ ಆಯಿತು. ಅವನು ಕಿರುನಗೆಸೂಸುತ್ತಾ ಆಸನದಮೇಲೆ ಕುಳಿತುಕೊಂಡನು.

"ನನ್ನ ವರ್ತನೆ ಕಂಡು ನಿಮಗೆ ಆಶ್ಚರ್ಯವಾಗಿರಬಹುದು. ಆದರೆ ತೀರಿಕೊಂಡ ಗಂಡನಿಗಾಗಿ ಎಷ್ಟುದಿನ ದುಃಖಪಡಲಿ? ನಾನೆಂದೂ ಕಷ್ಟಗಳನ್ನು ಅನುಭವಿಸಿದವಳಲ್ಲ. ಸತ್ತು ಹೋದವರು ಅತ್ತರೆ ಬರುತ್ತಾರೆಯೇ? ನನ್ನ ಬುದ್ಧಿಗೆ ಮಂಕು ಕವಿದಿದೆ. ಮಾತಿನ ನಡುವೆ ನಿಮಗೆ ಪಾನೀಯವನ್ನು ಕೊಡುವುದನ್ನೂ ಮರೆತುಬಿಟ್ಟೆ" ಎಂದು ರಾಜಕುಮಾರಿ ಮೆಲ್ಲನೆ ಮೇಜಿನಬಳಿಗೆ ಹೋಗಿ, ಮಾಂತ್ರಿಕನ ಕಡೆ ಬೆನ್ನುಮಾಡಿ, ಒಂದು ಬಟ್ಟಲು ಷರಬತ್ತಿಗೆ ಅಲ್ಲಾದೀನನು ಕೊಟ್ಟಿದ್ದ ಚೂರ್ಣವನ್ನು ಹಾಕಿ, ಮಾಂತ್ರಿಕನಿಗೆ ತಂದುಕೊಟ್ಟಳು.

"ನಿನ್ನ ಕಿರುನಗೆಯಲ್ಲಿರುವ ಮಾಧುರ್ಯದೊಂದಿಗೆ ಹೋಲಿಸಿದರೆ ಈ ಷರಬತ್ತೇನು ಮಹಾ" ಎಂದು ಮಾಂತ್ರಿಕನು ಷರಬತ್ತನ್ನು ಗಟಗಟನೆ ಕುಡಿದು ಕುಸಿದುಬಿದ್ದನು.

ಮಾಂತ್ರಿಕನು ಕೆಳಗೆಬಿದ್ದ ಸದ್ದು ಕೇಳಿ ಅಲ್ಲಾದೀನನು ಹೊರಗೆಬಂದನು. ಮಾಂತ್ರಿಕನು ಮಡಿದನೆಂದು ರೂಢಿಮಾಡಿಕೊಂಡು, ಅವನ ಅಂಗಿಯಿಂದ ಅದ್ಭುತದೀಪವನ್ನು ಹೊರಗೆ ತೆಗೆದನು. ತರುವಾಯ ಅವನು ತನ್ನ

ಹೆಂಡತಿಯನ್ನು ಹೊರಗೆ ಕಳುಹಿಸಿ, ದೀಪವನ್ನು ತಿಕ್ಕಿ ಭೂತವನ್ನು ಬರಮಾಡಿಕೊಂಡನು.

"ಎಲೈ ಭೂತವೇ, ಈ ಭವನವನ್ನು ಕೂಡಲೇ ಹಿಂದೆ ಚೀನಾದೇಶದಲ್ಲಿದ್ದ ಸ್ಥಳದಲ್ಲಿರಿಸು" ಎಂದು ಆಜ್ಞೆ ಮಾಡಿದನು.

ಮರುಕ್ಷಣವೇ ಅಲ್ಲಾದೀನನ ಭವನ ಚೀನಾದೇಶದಲ್ಲಿ ಅರಮನೆಯ ಮುಂದೆ ಇತ್ತು. ಅಲ್ಲಾದೀನನು ರಾಜಕುಮಾರಿಯನ್ನು ಕುರಿತು "ಪ್ರಿಯೇ, ನಾವು ಮತ್ತೆ ಸ್ವದೇಶಕ್ಕೆ ಬಂದಿರುವೆವು. ಆದರೆ ಈ ಅಪರಾತ್ರಿಯಲ್ಲಿ ನಿಮ್ಮ ತಂದೆಯವರನ್ನು ಭೇಟಿಮಾಡುವುದು ಅನುಚಿತವಾದೀತು! ನಾಳೆ ಅವರನ್ನು ನೋಡೋಣ" ಎಂದನು. ಅಗಲಿಕೆಯಾದಾಗಲಿಂದ ಆ ದಂಪತಿಗಳು ನಿದ್ರಾಹಾರಗಳನ್ನು ವರ್ಜಿಸಿದ್ದರು. ಅಂದು ಅವರಿಬ್ಬರೂ ವಿವಿಧ ಭಕ್ಷಭೋಜ್ಯಗಳನ್ನುಂಡು ನಿಶ್ಚಿಂತೆಯಿಂದ ನಿದ್ರಿಸಿದರು. ಮಾರನೇಯ ದಿನ ಬೆಳಗಾಯಿತು. ಬೆಳಗಾದಕೂಡಲೇ ತನ್ನ ಮಗಳನ್ನು ನೆನೆಸಿಕೊಂಡು ದುಃಖಪಡುವುದು ರಾಜನ ದಿನಚರಿಯಾಗಿತ್ತು. ಆತನು ಎಂದಿನಂತೆ ಕಿಟಕಿಯಿಂದ ಹೊರಗೆ ನೋಡಲು ಅಲ್ಲಾದೀನನ ಭವನ ಯಥಾಸ್ಥಾನದಲ್ಲಿರುವುದು ಕಂಡು ಬಂತು.

ಆತನು ಸಂತೋಷದಿಂದ ಹುಚ್ಚೆದ್ದು, ಅಲ್ಲಾದೀನನ ಭವನದಕಡೆ ಓಡಿದನು. ಭವನದ ಗೋಡೆಗಳನ್ನು ಮುಟ್ಟಿನೋಡಿದನು. ಇದು ಭ್ರಮೆಯಲ್ಲ, ಸತ್ಯವೆಂದು ದೃಢಮಾಡಿಕೊಂಡು ಭವನವನ್ನು ಪ್ರವೇಶಿಸಿ, ಸರಸರನೆ ತನ್ನ



ಮಗಳಿದ್ದ ಸ್ಥಳಕ್ಕೆ ಹೋಗಿ, ಮಗಳನ್ನು ಪ್ರೇಮದಿಂದ ಬರಸೆಳೆದು ಅಪ್ಪಿಕೊಂಡು ಆನಂದಾಶ್ರುಗಳನ್ನು ಸುರಿಸಿದನು.

"ಅಮ್ಮಾ, ನಿನ್ನನ್ನು ಮತ್ತೆ ನೋಡುವೆನೆಂದು ಭಾವಿಸಿರಲಿಲ್ಲ. ನೀನು ಯಮಯಾತನೆಯನ್ನು ಅನುಭವಿಸಿರಲೇಬೇಕೆಂದು ನನಗೆ ತೋರುವುದು. ನನ್ನನ್ನು ಅಗಲಿ ಒಂದು ಕ್ಷಣವಾದರೂ ಇರಲಾರೆಯಲ್ಲಾ! ಏನು ನಡೆಯಿತು, ಎಲ್ಲಿಗೆ ಹೋಗಿದ್ದೆ, ಎಲ್ಲಾ ತಿಳಿಸು ತಾಯಿ" ಎಂದು ಮಗಳನ್ನು ಕೇಳಿದ ರಾಜ.

ರಾಜಕುಮಾರಿ ನಡೆದ ಸಂಗತಿಯನ್ನೆಲ್ಲಾ ತಿಳಿಸಿ "ತಪ್ಪೆಲ್ಲಾ ನನ್ನದೇ ಅಪ್ಪಾ! ನನ್ನದಲ್ಲದ ವಸ್ತುವನ್ನು ಮತ್ತೊಬ್ಬರಿಗೆ ಏಕೆ ಕೊಡಬೇಕು, ಹೇಳಿ" ಎಂದಳು.

ತರುವಾಯ ಅಲ್ಲಾದೀನನು ರಾಜನಿಗೆ ಮಾಂತ್ರಿಕನ ಶವವನ್ನು ತೋರಿಸಿ "ಪ್ರಭೂ, ಇವನೇ ನನ್ನ ಕಷ್ಟಗಳಿಗೆಲ್ಲಾ ಕಾರಣ ಭೂತನು. ಇವನು ರೌರವನರಕಕ್ಕೆ ಹೋಗುವುದಂತೂ ಖಂಡಿತ" ಎಂದನು.

ಅಲ್ಲಾದೀನನು ನಿರ್ದೋಷಿಯೆಂದು ರಾಜನು ಗ್ರಹಿಸಿದನು. ಅಲ್ಲಾದೀನನನ್ನು ಗಾಢಾಲಿಂಗನ ಮಾಡಿಕೊಂಡು "ವತ್ಸಾ, ನಿನ್ನೊಂದಿಗೆ ನಿಷ್ಠುರವಾಗಿ ವರ್ತಿಸಿದೆನೆಂದು ಕೋಪಿಸಿಕೊಳ್ಳಬೇಡ. ನನಗೆ ನನ್ನ ಮಗಳೆಂದರೆ ಅಷ್ಟು ಪ್ರೀತಿ. ನಿನಗೆ ನನ್ನ ರಾಜ್ಯವನ್ನು ಬೇಕಾದರೆ ಕೊಟ್ಟುಬಿಡುತ್ತೇನೆ" ಎಂದು ರಾಜನು ಹೇಳಿದನು.

"ನಿಮ್ಮದೇನೂ ತಪ್ಪಿಲ್ಲ, ಮಹಾಪ್ರಭು. ನನ್ನ ಮೋಸದಿಂದ ನಿಮ್ಮ ಮಗಳು ಮಾಯವಾದಳೆಂದು ಭಾವಿಸಿದ್ದಿರಿ. ಒಂದು ರೀತಿ ಅದು ನಿಜ. ಯಾಕೆಂದರೆ ಮಾಂತ್ರಿಕನು ಅದ್ಭುತ ದೀಪದಮೇಲೆ ಕಣ್ಣಿಟ್ಟಿರುವನೆಂದೂ, ಯಾವುದಾದರೊಂದು ಉಪಾಯದಿಂದ ಅದನ್ನು ಪಡೆಯಲು ಪ್ರಯತ್ನಮಾಡುವನೆಂದೂ ನಾನು ಎಚ್ಚರಿಕೆಯಿಂದಿರಬೇಕಾಗಿತ್ತು. ನನ್ನ ಕಥೆಯನ್ನೆಲ್ಲಾ ಮತ್ತೊಂದುದಿನ ಹೇಳುವೆನು. ಆಗ ನಿಮಗೆ ಈ ಮಾಂತ್ರಿಕನ ದುಷ್ಟತನ ತಿಳಿಯುವುದು" ಎಂದ ಅಲ್ಲಾದೀನ್.

"ಮೊದಲು ಈ ಚಂಡಾಲನ ಶವವನ್ನು ಸಾಗಿಸುವ ಏರ್ಪಾಟುಮಾಡು" ಎಂದ ರಾಜ. ಅಲ್ಲಾದೀನನು ಸೇವಕರನ್ನು ಕರೆದು "ಈ ಶವವನ್ನು ಚಿರಣಿಯಮೇಲಿಟ್ಟು ಸುಟ್ಟು, ಬೂದಿಯನ್ನು ಕೊಳಚೆನೀರಿನಲ್ಲಿ ಕದಡಿಬಿಡಿ" ಎಂದು ಆಜ್ಞಾಪಿಸಿದನು. ಮಾಂತ್ರಿಕನ ದಹನ ಸಂಸ್ಕಾರವನ್ನು ನೋಡಲು ಜನ ಗುಂಪುಗುಂಪಾಗಿ ಬಂದರು.

ನಗರದಲೆಲ್ಲಾ ಉತ್ಸವಗಳನ್ನು ಆಚರಿಸಬೇಕೆಂದು ರಾಜನು ಆಜ್ಞೆಮಾಡಿದನು. ಈ ಸಂತೋಷ ಸಮಾರಂಭದಲ್ಲಿ ಅನೇಕ ಜನ ಖೈದಿಗಳನ್ನು ಬಿಡುಗಡೆ ಮಾಡಲಾಯಿತು. ಬಡವರಿಗೆ ದಾನಧರ್ಮಗಳನ್ನು ಮಾಡಿದರು. ಬಾಣಬಿರುಸುಗಳನ್ನು ಸುಟ್ಟರು. ಅಲ್ಲಾದೀನನು ತನ್ನ ಮಡದಿ ಮತ್ತು ಮಾತೆಯೊಂದಿಗೆ ಸುಖವಾಗಿದ್ದನು. [ಇನ್ನೂ ಇದೆ]






# ಅಲೀನೂರ್

ಆನಂದೋದ್ಯಾನವನ್ನು ಸೇರಿದಾಗ ತೋಟದ ಬಾಗಿಲು ತೆರೆದಿತ್ತು. ಇಬ್ರಾಹಿಂ ಎಂದೂ ಅಷ್ಟು ಅಜಾಗ್ರತೆ ವಹಿಸಿದವನಲ್ಲ. ಒಳಗೆ ಪ್ರಾರ್ಥನೆ ನಡೆಯುವ ಸೂಚನೆಗಳೂ ಕಾಣ ಬರಲಿಲ್ಲ. "ಒಳಗೇನು ನಡೆಯುತ್ತಿರುವುದೋ ರಹಸ್ಯವಾಗಿ ನೋಡೋಣ" ಎಂದು ಖಲೀಫಾ ಜಾಫರನ ಸಹಾಯದಿಂದ ಸನಿಯದಲ್ಲಿದ್ದ ಮರವನ್ನೇರಿ ಕಿಟಕಿಯಮೂಲಕ ನೋಡಿದ. ಒಳಗೆ ಸುಂದರಳಾದ ತರುಣಿ ಮತ್ತು ಯುವಕನೊಬ್ಬನು ಕಾಣಿಸಿದರು. ಇಳಿ ವಯಸ್ಸಿನ ಇಬ್ರಾಹಿಂ ಕೈಯಲ್ಲಿ ಮಧುಪಾತ್ರೆಯನ್ನು ಹಿಡಿದು ಅವರ ನಡುವೆ ಕುಳಿತು "ಮಗಳೇ, ನೀನೊಂದು ಹಾಡು ಹಾಡಿದ ಹೊರತು ನಮ್ಮ ಇಂದಿನ ಆನಂದ ಪರಿಪೂರ್ಣತೆ ಹೊಂದಲಾರದು, ಉಂ, ಹಾಡು" ಎಂದು ಹೇಳಿದನು.

ಪ್ರಿಯಸಖಿಗೆ ಪ್ರೋತ್ಸಾಹ ಕೊಡಲು ಮುದುಕನು ತಾನೇ ಒಂದು ಕೃತಿ ಹಾಡಿದನು. ಅದನ್ನು ಕಂಡು ಖಲೀಫಾ ಕೋಪದಿಂದ ಕೆಳಗಿಳಿದು "ಮಾಲಿಯ ಮೊಮ್ಮಗನ ಉಪಾಕರ್ಮ ಎಷ್ಟು ಶಾಸ್ತ್ರೋಕ್ತವಾಗಿ ನಡೆಯುತ್ತಿರುವುದೋ ನೋಡಿ ಆನಂದಪಡು" ಎಂದು ವ್ಯಂಗ್ಯತುಂಬಿದ ಸ್ವರದಲ್ಲಿ ಜಾಫರನಿಗೆ ಹೇಳಿದನು.

ಜಾಫರ್ ಮರವನ್ನೇರಿ ಒಳಗೆ ನಡೆಯುತ್ತಿದ್ದ ವಿಲಾಸವನ್ನು ನೋಡಿ ವಿಸ್ಮಯಹೊಂದಿದನು. ಆತನು ಖಲೀಫನ ಕಾಲಿಗೆ ಬಿದ್ದನು. "ಏಕೆಚಿಂತಿಸುವೆ, ಜಾಫರ್. ನಾನು ನಿನ್ನನ್ನು ಕ್ಷಮಿಸಿದ್ದೇನೆ. ಒಳಗೇನೇನು ನಡೆಯುವುದೋ ನೋಡಿಯೇಬಿಡೋಣ. ಮರವನ್ನೇರು ಮತ್ತೆ" ಎಂದ ಖಲೀಫ.

ಮಾಲಿ ಒಂದು ಸಿತಾರವನ್ನು ತಂದು ಪ್ರಿಯಸಖಿಯ ಮುಂದಿಟ್ಟನು. ಆಕೆ ಸಿತಾರ ನುಡಿಸುತ್ತಾ ಒಂದು ಹಾಡು ಹಾಡಿದಳು. ಖಲೀಫಾ ಜಾಫರನಕಡೆ ತಿರುಗಿ "ಮಂತ್ರೀ, ನಾನು ಇಂತಹ ಸಂಗೀತ ಮಾಧುರ್ಯವನ್ನು

ಎಸ್. ಪಿ. ಕುಮಾರಿ



ಎಂದೂ ಅನುಭವಿಸಿರಲಿಲ್ಲ. ಭೇಷ್ " ಎಂದು ತನ್ನ ಮೆಚ್ಚಿಗೆ ಸೂಚಿಸಿದನು.

"ಹಾಗಾದರೆ ಮಹಾಪ್ರಭುಗಳಿಗೆ ನನ್ನ ಮೇಲಿನ ಸಿಟ್ಟು ಹೋಯಿತೇ?" ಎಂದು ಜಾಫರ್ ಕೇಳಿದನು. ಖಲೀಫನು ಅವನನ್ನು ನೋಡಿ ಮುಗುಳುನಗೆ ಸೂಸಿದನು. ಇಬ್ಬರೂ ಮರದಿಂದ ಕೆಳಗಿಳಿದರು. ತರುವಾಯ ಖಲೀಫನು "ನಾನೀಗ ಒಳಗೆ ಪ್ರವೇಶಿಸಿ ಅಲ್ಲಿರುವ ಅಪರಿಚಿತರು ಯಾರೋ ತಿಳಿದುಕೊಳ್ಳುತ್ತೇನೆ," ಎಂದ.

ನೀವು ಈಗಿನ ವೇಷದಲ್ಲೇ ಹೋದರೆ ಆ ಮೂವರೂ ಬೆದರುವುದು ಖಂಡಿತ." ಎಂದು ಜಾಫರ್ ಸೂಚಿಸಿದ. ಅದೇ ಸಮಯದಲ್ಲಿ ಉದ್ಯಾನದಲ್ಲಿದ್ದ ಕೊಳದಬಳಿ ಮರಮರ ಶಬ್ದವಾಯಿತು. ಆ ಕೊಳಕ್ಕೆ ಟೈಗ್ರಿಸ್ ನದಿಯಿಂದ ನೀರು ಬರುತ್ತಿತ್ತು. ಆದರೊಂದಿಗೆ ಮೀನೂಸಹ ಕೊಚ್ಚಿಕೊಂಡು ಬರುತಿತ್ತು. ಇಬ್ರಾಹಿಂ ದಿನಾ ಅವುಗಳಿಗೆ ಆಹಾರ ಹಾಕುತ್ತಿದ್ದನು. ಅವುಗಳನ್ನು ಯಾರೂ ಹಿಡಿಯುತ್ತಿರಲಿಲ್ಲ. ಆ ಕೊಳದಲ್ಲಿ ಮೀನುಗಳು ಯಥೇಚ್ಛವಾಗಿರುತ್ತವೆ. ನದಿಯಲ್ಲಿ ಮೀನುಗಳು ಸಿಗದಿದ್ದರೆ ಕೆಲವಾರು ಬೆಸ್ತರು ಮಾಲಿಯಕಣ್ಣಿಗೆ ಬೀಳದಂತೆ ತೋಟವನ್ನು ಪ್ರವೇಶಿಸಿ ಕೊಳದಲ್ಲಿ ಮೀನು ಹಿಡಿಯುವುದುಂಟು. ಆ ರಾತ್ರಿ ಕರೀಂ ಎಂಬ ಬೆಸ್ತನು, ಉದ್ಯಾನವನದ ಬಾಗಿಲು ತೆರೆದಿರುವುದನ್ನು ಕಂಡು, ಕೊಳದಲ್ಲಿ ಮೀನು ಹಿಡಿಯಲು ಬಂದು, ಖಲೀಫನ ಕೈಗೆ ಸಿಕ್ಕಿ ಹಾಕಿಕೊಂಡನು. ಖಲೀಫನಿಗೆ ಅವನ ಗುರುತು ಸಿಕ್ಕಿತು. "ಎಲಾ, ಕರೀಂ. ಏನು ಮಾಡುತ್ತಿರುವೆ ಇಲ್ಲಿ?" ಎಂದು ಕೇಳಿದನು. ಕರೀಂಗೆ ಸಹ ಖಲೀಫನ ಗುರುತು ಸಿಕ್ಕಿತು. ಅವನು ಭಯದಿಂದ ಥರಥರ ನಡುಗುತ್ತಾ "ಅಪರಾಧವಾಯಿತು. ಮಹಾಪ್ರಭುಗಳು ಕ್ಷಮಿಸಬೇಕು" ಎಂದು ಬೇಡುತ್ತಾ ಖಲೀಫನ ಕಾಲಿಗೆರಗಿದನು.

ಖಲೀಫನು ನಗುತ್ತಾ "ಸರಿ, ಈ ಸಾರಿ ಮಾಫ್ ಮಾಡಿದ್ದೇನೆ. ಬಲೆಬೀಸು. ನಿನ್ನ ಅದೃಷ್ಟ ಹೋಗಿದೆಯೋ ನೋಡಿಬಿಡೋಣ" ಎಂದ. ಕರೀಂ ಬಲೆಬೀಸಿದ. ಬಹಳ ಮೀನುಗಳು ಬಲೆಗೆಬಿದ್ದುವು. "ನಿನ್ನ ಅದೃಷ್ಟ ನೆಟ್ಟಗಿದೆ ಕಣೊ. ಎಲ್ಲಿ ನಿನ್ನ ಬಟ್ಟೆಗಳನ್ನು ಕಳಚಿ



ನನಗೆ ಕೊಡು" ಎಂದ ಖಲೀಫ್. ಕರೀಂ ಮರುಮಾತನಾಡದೆ ತನ್ನ ಬಟ್ಟೆಗಳನ್ನು ಕಳಚಿ ಖಲೀಫನಿಗೆ ಕೊಟ್ಟನು. ಖಲೀಫ ಆ ಬಟ್ಟೆಗಳನ್ನು ತೊಟ್ಟು, ಕೆಲವು ಮೀನು ಗಳನ್ನು ಬುಟ್ಟಿಯಲ್ಲಿ ಹಾಕಿಕೊಂಡು, ಮಹ ಲಿನಬಳಿಗೆ ಹೋಗಿ ಕದತಟ್ಟಿದನು.

ಮಾಲಿ ಬಾಗಿಲು ತೆಗೆದನು. ಅವನಿಗೆ ಖಲೀಫನ ಗುರುತು ಸಿಕ್ಕಲಿಲ್ಲ. ಆತನನ್ನು ಬೆಸ್ತನೆಂತಲೇ ಭಾವಿಸಿ "ಏನು ಕರೀಂ, ಯಾವಕಾರ್ಯದಮೇಲೆ ಬಂದೆ?" ಎಂದು ಕೇಳಿದನು. "ನಿಮ್ಮ ಮನೆಗೆ ಯಾರೋ ಅತಿಥಿ ಗಳು ಬಂದಿರುವ ವಿಷಯ ತಿಳಿಯಿತು. ಬಲು ಒಳ್ಳೇ ಮೀನುಗಳನ್ನು ತಂದಿದ್ದೇನೆ ನೋಡಿ" ಎಂದ ವೇಷಧಾರಿ ಖಲೀಫ್.

ಪ್ರಿಯಸಖಿ ಎದ್ದು ಬಂದು, ಮೀನುಗಳನ್ನು ಕಂಡು "ಅಯ್ಯಾ, ಅವುಗಳನ್ನು ಬೇಯಿಸಿ ಕೊಂಡು ಬಾ" ಎಂದಳು.

ಖಲೀಫನು ಹೊರಗೆ ಬಂದು ಒಳಗೆ ನಡೆದು ದನ್ನೆಲ್ಲಾ ಜಾಫರನಿಗೆ ತಿಳಿಸಿ, ಇಬ್ರಾಹಿಂ ವಾಸಿಸುತ್ತಿದ್ದ ಗುಡಿಸಿಲಿಗೆ ಹೋಗಿ ಮೀನು ಕೊಯ್ದು ಒಲೆಯಮೇಲಿಟ್ಟು ಬೇಯಿಸಿದನು. ನಂತರ ಅದನ್ನು ಮಹಲಿಗೆ ತೆಗೆದುಕೊಂಡು ಹೋಗಿ ಪ್ರಿಯಸಖಿಯ ಮುಂದಿಟ್ಟನು. ಆ ತರುಣದಂಪತಿಗಳು ಮತ್ತು ಮಾಲಿ ಅದನ್ನು ಭುಜಿಸಿ ತಮ್ಮ ಸಂತೋಷ ವ್ಯಕ್ತಪಡಿಸಿದರು.

ಅಲೀನೂರ್ ಖಲೀಫನ ಕೈಗೆ ಮೂರು ದೀನಾರಗಳನ್ನು ಕೊಟ್ಟು "ನಿನ್ನ ಉಪಕಾರಕ್ಕೆ



ಇದೋ ಪ್ರತಿಫಲ. ಒಂದಾನೊಂದು ಕಾಲ ದಲ್ಲಿ ನಿನ್ನ ಬಡತನವನ್ನು ಹೋಗಲಾಡಿಸುವ ಶಕ್ತಿ ನನಗಿತ್ತು. ಈಗ ನಾನು ಬಹಳ ಅಶಕ್ತ ನಾಗಿದ್ದೇನೆ" ಎಂದನು.

ಖಲೀಫ ಆ ದೀನಾರಗಳನ್ನು ಕಣ್ಣಿಗೆ ಒತ್ತಿ ಕೊಂಡು, ಹಣವನ್ನು ಬುಟ್ಟಿಗೆ ಹಾಕಿ, "ತಾವು ಕೊಟ್ಟ ಹಣಕ್ಕಿಂತಲೂ ನನಗೆ ಈ ಅಮ್ಮಾವರ ಹಾಡು ಕೇಳಬೇಕೆನಿಸುತ್ತಿದೆ. ನನಗೆ ಸಂಗೀತವೆಂದರೆ ಪ್ರಾಣ" ಎಂದ. ಅಲೀನೂರನ ಅನುಮತಿ ಪಡೆದು ಪ್ರಿಯಸಖಿ ಒಂದು ಹಾಡು ಹಾಡಿದಳು. ಖಲೀಫನು ತನ್ನ ಆನಂದವನ್ನು ತಡೆಯಲಾರದೆ "ಶಹ ಭಾಸ್, ಶಹಭಾಸ್" ಎಂದು ಚಪ್ಪಾಳೆ ತಟ್ಟಿದನು. ಅದನ್ನು ಕಂಡು ಅಲೀನೂರ್

"ಎಲೈ ಬೆಸ್ತನೇ, ನಿನಗೆ ಈಕೆ ತುಂಬಾ ನೆಚ್ಚಿಕೆಯಾಗಿರುವಂತಿದೆ. ಈಕೆಯನ್ನು ನೀನೇ ತೆಗೆದುಕೊ" ಎಂದು ಎದ್ದು ನಿಂತನು.

ಪ್ರಿಯಸಖಿ ಕಣ್ಣೀರಿಡುತ್ತಾ "ಅಲೀ ನೂರ್, ನನ್ನನ್ನು ಬಿಟ್ಟು ಎಲ್ಲಿಗೆ ಹೋಗುವೆ?" ಎಂದು ಕಂಪಿತಕಂಠದಿಂದ ಕೇಳಿದಳು.

ಇವರಿಬ್ಬರ ಚರ್ಯೆ ನೋಡಿ ಖಲೀಫನಿಗೆ ಆಶ್ಚರ್ಯದೊಂದಿಗೆ ತುಂಬಾ ನೋವೂ ಆಯಿತು. ಅಲೀನೂರನನ್ನು ಕುರಿತು "ಯುವಕನೇ, ನೀನು ಈ ಗುಲಾಮಳನ್ನು ಅಪಹರಿಸಿಕೊಂಡು ಬಂದಿಲ್ಲವಷ್ಟೇ?" ಎಂದು ಕೇಳಿದನು. ಅಲೀನೂರ್ ಆತನಿಗೆ ತನ್ನ ಯಾವತ್ತೂ ಕಥೆಯನ್ನು ಹೇಳಿದನು. "ಹಾಗಾದರೆ ಮುಂದೇನು ಮಾಡಲಿರುವೆ?" ಎಂದ ಖಲೀಫ. "ಅಲ್ಲಾ ಸೃಷ್ಟಿಸಿದ ಈ ಪ್ರಪಂಚ ವಿಶಾಲವಾದುದು. ಬದುಕಲು ಅನೇಕ ವಿಧವಾದ ಮಾರ್ಗಗಳಿವೆ" ಎಂದ ಅಲೀನೂರ್.

"ನಾನೊಬ್ಬ ಬಡ ಬೆಸ್ತನಾದುದರಿಂದ ನಿನಗೆ ಬಹಳ ಸಹಾಯಮಾಡುವ ಸ್ಥಿತಿಯಲ್ಲಿಲ್ಲ. ಆದರೆ ನಾನು ಹೇಳಿದಪ್ರಕಾರ ಮಾಡಿದರೆ ನಿನ್ನ ತಾಪತ್ರಯಗಳು ತೀರುತ್ತವೆ" ಎಂದು ಖಲೀಫಾ ಮಾಲಿಯಿಂದ ಕಾಗದವನ್ನು ತರಿಸಿ, ಬಸ್ರಾನಗರದ ಸುಲ್ತಾನನಿಗೆ ಒಂದು ಪತ್ರ ಬರೆದನು.

"ಬಸ್ರಾ ಸುಲ್ತಾನನಿಗೆ ಖಲೀಫ ಹರೂನ್ ಅಲ್ ರಷೀದ್ ಬರೆಯುವುದೇನೆಂದರೆ: ಈ ಪತ್ರ ತರುವವನು ವಜೀರ್ ಅಲ್‌ಫದಲ್‌ನ ಕುಮಾರ ಅಲೀನೂರ್. ಈ ಪತ್ರ ಕಂಡತಕ್ಷಣ



ನೀನು ಗದ್ದುಗೆಯಿಂದ ಇಳಿದು ಅಲೀನೂರ ನನ್ನು ನಿನ್ನ ಸ್ಥಾನದಲ್ಲಿ ಸುಲ್ತಾನನನ್ನಾಗಿ ಮಾಡಬೇಕು. ಆಲಸ್ಯಕೂಡದು."

ಆ ಪತ್ರದಮೇಲೆ ತನ್ನ ಮುದ್ರೆಯನ್ನು ಒತ್ತಿ, ಖಲೀಫಾ ಲಕ್ಕೋಟೆಯನ್ನು ಅಲೀ ನೂರನಿಗೆ ಕೊಟ್ಟು ಹೀಗೆಂದನು: "ಇದನ್ನು ತೆಗೆದುಕೊಂಡು ಹೋಗಿ ಬಸ್ರಾ ಸುಲ್ತಾನರಿಗೆ ಕೊಡು. ನಿನ್ನ ಕಷ್ಟಗಳು ದೂರವಾಗುವುವು"

ಅಲೀನೂರ್ ಹೊರಡಲು ಸಿದ್ಧನಾದನು. ಪ್ರಿಯಸಖಿ ರೋದಿಸಲಾರಂಭಿಸಿದಳು. ಮಾಲಿ ಖಲೀಫನಕಡೆ ದುರುಗುಟ್ಟಿ ನೋಡಿ "ಎಲವೋ ನೀಚ, ಈ ದಂಪತಿಗಳ ನಡುವೆ ನೀನು ಅಗಲಿಕೆಯನ್ನುಂಟುಮಾಡಿದೆ. ಮೂರು ಕಾಸು ಬೆಲೆಬಾಳುವ ನಿನ್ನ ಹಾಳು ಮೀನುಗಳಿಗೆ ಮೂರು ದೀನಾರಗಳನ್ನು ಕೊಟ್ಟರೆ ತೃಪ್ತಿ ಪಡಬಾರದಿತ್ತೇ" ಎಂದು ಹಳಿದನು.

ಖಲೀಫನಿಗೆ ಇದ್ದಕ್ಕಿದ್ದಂತೆ ಆವೇಶ ಬಂತು. ಆತನು ಚಪ್ಪಾಳೆತಟ್ಟಲು ವಜೀರ್ ಜಾಫರ್ ಮತ್ತು ಮಸ್ರೂ ಒಳಗೆ ಪ್ರವೇಶಿಸಿದರು. ಜಾಫರ್ ಬಂದನಂತರ ಖಲಿಫಾ ತಾನು ಧರಿಸಿದ್ದ ಬೆಸ್ತನ ಉಡುಪನ್ನು ಕಳಚಿ ತನ್ನ ಸ್ವಂತ ಉಡುಪನ್ನು ಧರಿಸಿದನು. ಆಗ ಇಬ್ರಾಹಿಮನ ಕಣ್ಣುಗಳು ತೆರೆದುವು. ಅವನು ಖಲೀಫನ ಕಾಲಿಗೆ ಬಿದ್ದನು.

ಖಲೀಫನು ಮಾಲಿಯನ್ನು ಕ್ಷಮಿಸಿ, ಪ್ರಿಯ ಸಖಿಯೊಂದಿಗೆ "ಮಗಳೇ, ನಾನು ಯಾರೆಂಬುದು ನಿನಗೆ ಈಗ ತಿಳಿದಿರಬೇಕು. ನಿನ್ನ ಯಜಮಾನನು ಬರುವತನಕ ನನ್ನ ಮನೆ





ಲಕ್ಕೋಟೆಯನ್ನು ಮೂರು ಬಾರಿ ಕಣ್ಣಿಗೆ ಒತ್ತಿಕೊಂಡು, ಪತ್ರವನ್ನು ತೆಗೆದು ಓದಿದನು. ತರುವಾಯ ಆತನು "ಖಲೀಫರ ಆಜ್ಞೆ ದೈವಾಜ್ಞೆ" ಎಂದನು.

ಖಲೀಫರ ಆಜ್ಞಾನುಸಾರವಾಗಿ ತನ್ನ ಪದವಿಯನ್ನು ಅಲೀನೂರ್‌ಗೆ ವಹಿಸಿಕೊಡಲು ನಿಶ್ಚಯಿಸಿ, ಸುಲ್ತಾನನು ನಗರದಲ್ಲಿದ್ದ ಖಾಜಿಗಳನ್ನೂ, ಅಮೀರರನ್ನೂ ಕರೆಯಕಳುಹಿಸಿದನು. ಸರಿಯಾಗಿ ಆಗಲೇ ವಜೀರ್ ಸಾವಿ ಅಲ್ಲಿಗೆ ಬಂದನು. ಸುಲ್ತಾನನು ಪತ್ರವನ್ನು ಅವನ ಕೈಗೆ ಕೊಟ್ಟನು. ಸಾವಿ ಪತ್ರವನ್ನು ಓದಿದ ನಂತರ ಖಲೀಫನ ಮುದ್ರೆಯಿದ್ದ ಭಾಗವನ್ನು ಮಾತ್ರ ಹರಿದು ಮೂಲೆಗೆಸೆದನು. "ನೀಚನೇ, ನಿನಗೇನು ಮತಿ ಹೋಯಿತೇ? ಹಾಗೇಕೆ ಮಾಡಿದೆ?" ಎಂದು ಗುಡುಗಿದ ಸುಲ್ತಾನ.

ಯಲ್ಲಿರು, ಸಂಕೋಚ ಪಡಬೇಡ" ಎಂದನು. ಪ್ರಿಯಸಖಿ ಖಲೀಫನಸಂಗಡ ಅರಮನೆಗೆ ಹೋದಳು. ಅಲ್ಲಿ ಆಕೆಗೊಂದು ಪ್ರತ್ಯೇಕ ಕೋಣೆ ಕೊಡಲಾಯಿತು. ದಾಸಿಯರನ್ನು ನೇಮಿಸಲಾಯಿತು. ಖಲೀಫನು ಆಕೆಯೊಂದಿಗೆ "ನಿನ್ನ ಯಜಮಾನನು ಬಸ್ರಾನಗರದ ಸುಲ್ತಾನನಾಗಲಿರುವನು. ನೀನು ರಾಣಿಯಾಗುವೆ. ಚಿಂತಿಸಬೇಡ" ಎಂದು ಆಕೆಯನ್ನು ಸಮಾಧಾನಗೊಳಿಸಿದನು.

ಕೆಲವು ದಿನಗಳನಂತರ ಅಲೀನೂರ್ ಬಸ್ರಾ ನಗರವನ್ನು ತಲುಪಿ, ಸುಲ್ತಾನನ ದರ್ಶನ ಪಡೆದು, ಆತನಿಗೆ ಖಲೀಫಾ ಕೊಟ್ಟ ಲಕ್ಕೋಟೆಯನ್ನು ಕೊಟ್ಟನು. ಸುಲ್ತಾನನು ಖಲೀಫನ ಮುದ್ರೆ ನೋಡಿ ಗೌರವದಿಂದ ಎದ್ದು ನಿಂತು,

"ಈ ವಂಚಕನು ಖಲೀಫರನ್ನು ಭೇಟಿ ಮಾಡಿದನೆಂದು ನೀವು ನಂಬಬೇಡಿ. ಈ ಪತ್ರವನ್ನು ತಾನೇ ಸೃಷ್ಟಿಸಿರುತ್ತಾನೆ. ಖಲೀಫರೇ ಬರೆದಿದ್ದರೆ ಅವರು ತಮ್ಮ ಸ್ವಂತ ಕಾರಕೂನರಿಂದ ಬರೆಯಿಸುತ್ತಿದ್ದರು. ಅದರಮೇಲೆ ಅರಮನೆಯ ಅಧಿಕಾರಿಗಳ ಮುದ್ರೆಗಳಿರುತ್ತಿದ್ದುವು. ಇವನನ್ನು ನನಗೊಪ್ಪಿಸಿಬಿಡಿ. ನಾನು ಅಧಿಕಾರಿಯೊಬ್ಬನನ್ನು ಕಳುಹಿಸಿ ಈ ಪತ್ರದ ಸತ್ಯಾಸತ್ಯದ ವಿಷಯವರಿಯುವೆನು" ಎಂದು ಸಾವಿ ಬಹಳಹೊತ್ತು ಸುಲ್ತಾನನ ಕಿವಿಯಲ್ಲಿ ಮತ್ತೂ ಏನೇನೋ ಗುಸುಗುಟ್ಟಿದನು. ಅಲೀನೂರ್ ದೋಷಿಯೆಂದು ಸುಲ್ತಾನನು



ನಂಬಿದನು. ಕೂಡಲೇ ಭಟರನ್ನು ಕರೆದು ಅವನಿಗೆ ಹತ್ತು ಛಡಿಏಟು ಕೊಡುವಂತೆ ಆಜ್ಞಾಪಿಸಿದನು. ಅಲೀನೂರ್ ಪೆಟ್ಟಿನ ಬಾಧೆಗೆ ಮೂರ್ಛಿತನಾದನು. ಸುಲ್ತಾನನು ಅವನನ್ನು ಜೈಲಿನಲ್ಲಿಡಿಸಿದನು.

ಸೆರೆಮನೆಯ ಅಧಿಕಾರಿಯ ಹೆಸರು ಕುತೈತ್. ಅವನು ಅಲೀನೂರನ ಕೈಕಾಲುಗಳಿಗೆ ಹಾಕಿದ್ದ ಬೇಡಿಗಳನ್ನು ಕಳಚಿದನು. ಆ ಕೋಣೆಯನ್ನು ತಾನೇ ಸ್ವತಃ ಶುಭ್ರಗೊಳಿಸಿ, ಕಂಬಳಿಯೊಂದನ್ನು ಹಾಸಿದನು. "ಅಯ್ಯಾ, ನಾನು ನಿಮ್ಮ ತಂದೆಯವರಿಂದ ಬಹಳ ಸಹಾಯಪಡೆದಿರುವೆನು. ನನ್ನಿಂದ ನಿಮಗೇನೂ ತೊಂದರೆಯಾಗದು" ಎಂದು ಭರವಸೆ ನೀಡಿದನು. ಅಂದಿನಿಂದ ನಲವತ್ತು ದಿನ ಆ ಅಧಿಕಾರಿ ಅಲೀನೂರ್‌ಗೆ ತನ್ನಿಂದ ಸಾಧ್ಯವಾದ ಸೌಕರ್ಯಗಳನ್ನು ಒದಗಿಸಿದನು. ದಿನಾ ವಜೀರ್‌ಸಾವಿಗೆಮಾತ್ರ "ಖೈದಿಗೆ ಚಿತ್ರಹಿಂಸೆ ಕೊಡಲಾಯಿತು" ಎಂದು ಸುಳ್ಳುಸಳ್ಳೇ ವರದಿ ಒಪ್ಪಿಸುತ್ತಿದ್ದನು.

ಇತ್ತ ಬಾಗದಾದಿನಲ್ಲಿ ಒಂದು ದಿನ ಖಲೀಫಾ ಅರಮನೆಯ ಕೋಣೆಯೊಂದರ ಪಕ್ಕದಲ್ಲಿ ಹಾದುಹೋಗುತ್ತಿರಲು ಯಾರೋ ಅಳುತ್ತಿರುವ ಧ್ವನಿ ಕೇಳಿಸಿತು. ಯಾರೆಂದು ಭಟರನ್ನು ಕೇಳಿದನು. ಅವರು ಪ್ರಿಯಸಖಿಯನ್ನು ಕರೆತಂದು ಖಲೀಫನಮುಂದೆ ನಿಲ್ಲಿಸಿದರು. ಖಲೀಫಾ ಆಕೆಯ ವಿಷಯವನ್ನೇ ಮರೆತುಬಿಟ್ಟಿದ್ದನು. ಪ್ರಿಯಸಖಿ ಅಳುತ್ತಾ, "ಅಲೀ



ನೂರ್ ಬಸ್ರಾನಗರಕ್ಕೆ ಹೋಗಿ ಸುಮಾರು ದಿನಗಳಾದುವು. ಇದುವರೆವಿಗೆ ಅವರಿಂದ ಯಾವ ಸುದ್ದಿಯೂ ಬಂದಿಲ್ಲ" ಎಂದಳು. ಖಲೀಫನು ಕೂಡಲೇ ಒಬ್ಬ ನೌಕರನ ಸಂಗಡ ಅಲೀನೂರ್‌ಗೆ ಕೆಲವು ಬಹುಮಾನವನ್ನು ಕೊಟ್ಟು ಕಳುಹಿಸಿದನು.

ಅಲೀನೂರ್ ಸೆರೆಮನೆಯಲ್ಲಿದ್ದಾಗ ಈ ಬಹುಮಾನ ಬಸ್ರಾನಗರವನ್ನು ತಲುಪಿತು. ಅದನ್ನು ಯಾರು, ಯಾರಿಗೆ ಕಳುಹಿಸಿದರೋ ಸುಲ್ತಾನನಿಗೆ ತಿಳಿಯಲಿಲ್ಲ. ವಜೀರನನ್ನು ಕೇಳಲು ಆತನೂ ಏನೂ ಹೇಳಲಾರದೆ ಹೋದನು. ಆ ಬಹುಮಾನ ಅಲೀನೂರ್‌ಗೆ ಖಲೀಫರಿಂದ ಬಂದಿರಬಹುದೆಂದು ಅವನು ಶಂಕಿಸಿದನು. ಇದು ನಿಜವಾದರೆ ಅಲೀನೂರ್

ಜೀವಿಸುವುದು ತನಗೆ ಕ್ಷೇಮಕರವಲ್ಲವೆಂದು ಸಾವಿ ಅರಿತನು. ಅದರಿಂದ ಅವನು “ಮಹಾ ಪ್ರಭು, ಆ ದುರುಳ ಅಲೀನೂರ್‌ನನ್ನು ಕೊಂದು ಬಿಡಬೇಕೆಂದು ಆಜ್ಞಾಪಿಸಿದ್ದಿರಲ್ಲವೇ?” ಎಂದು ಸುಲ್ತಾನನಿಗೆ ಚುಚ್ಚಿ ಕೊಟ್ಟನು.

“ಒಳ್ಳೆ ಸಮಯಕ್ಕೆ ಜ್ಞಾಪಕಮಾಡಿದೆ. ಅವನ ಶಿರಚ್ಛೇದನವಾಗಲಿ” ಎಂದ ಸುಲ್ತಾನ.

ಬಾಗದಾದಿನಲ್ಲಿ ಖಲೀಫನಿಗೆ ಅಲೀನೂರ್ ಜೀವಿಸಿರುವನೋ ಇಲ್ಲವೋ ಎಂಬ ಸಂದೇಹ ಮೂಡಿತು. ಆತನು ಜಾಫರನನ್ನು ಕರೆದು “ನೀನು ಕೊಂಚ ಸೈನ್ಯವನ್ನು ತೆಗೆದುಕೊಂಡು ಬಸ್ರಾನಗರಕ್ಕೆ ಹೋಗು. ಅಲೀನೂರ್ ಸುಲ್ತಾನನಾಗಿದ್ದರೆ ಸರಿ. ಇಲ್ಲ ಏನಾದರೂ ಅನಾಹುತ ನಡೆದಿದ್ದರೆ ಅಪರಾಧಿಗಳನ್ನು ಹಿಡಿದು ಎಳೆದುಕೊಂಡು ಬಾ” ಎಂದ. ಜಾಫರ್ ಕೊಂಚ ಪರಿವಾರದೊಂದಿಗೆ ಬಸ್ರಾ ನಗರಕ್ಕೆ ಪ್ರಯಾಣ ಹೊರಟನು.

ಅಲೀನೂರನನ್ನು ಸೆರೆಮನೆಯಿಂದ ರಾಜ ಸಭೆಗೆ ಕರೆತರಲಾಯಿತು. ಅಲೀನೂರನ ಶಿರಚ್ಛೇದ ಮಾಡಲಿರುವರೆಂಬ ಸುದ್ದಿ ಕೇಳಿ ಜನ ತಂಡೋಪತಂಡವಾಗಿ ನೋಡಲು ಬಂದಿದ್ದರು. ಅವರೆಲ್ಲರಿಗೂ ಅಲೀನೂರನೆಂದರೆ ತುಂಬಾ ಅಭಿಮಾನ.

ವಜೀರ್ ಸಾವಿ ತನ್ನ ಭಟರೊಂದಿಗೆ “ಈ ದುರುಳನನ್ನು ಕತ್ತೆಯಮೇಲೆ ಕೂರಿಸಿ” ಎಂದನು. “ಅಲೀನೂರ್, ಆ ಮುದಿ ಗೂಬೆಯನ್ನು ಕೊಲ್ಲಲು ನಮಗೆ ಅನುಮತಿ ಕೊಡು” ಎಂದು ಜನಸ್ತೋಮ ಕೂಗಿತು. “ನೀವು



ಅವಸರಪಡಬೇಡಿ. ವಿಧಿ ಲಿಖಿತದಂತೆ ಅನುಭವಿಸಲೇಬೇಕು " ಎಂದ ಅಲೀನೂರ್.

ಸಾವಿಯ ಭಟರುಅಲೀನೂರನನ್ನು ಒಂದು ಕತ್ತೆಯಮೇಲೆ ಕೂರಿಸಿ ವಧ್ಯಸ್ಥಾನಕ್ಕೆ ಕರೆದುಕೊಂಡು ಹೋದರು. ಶಿರಚ್ಛೇದಮಾಡುವ ಚಂಡಾಲನು ಕತ್ತಿಯನ್ನು ಹಿಡಿದುಕೊಂಡು ಸಿದ್ಧವಾಗಿದ್ದನು. ಸುಲ್ತಾನನು ಅರಮನೆಯ ಕಿಟಕಿಯಿಂದ ಬಾಗಿನೋಡಿ ಅನುಮತಿ ನೀಡಿದ ಕೂಡಲೇ ಶಿರಚ್ಛೇದನವಾಗುವುದು. ಅಂತಲೇ ಎಲ್ಲರ ಗಮನ ಅರಮನೆಯ ಕಿಟಕಿಯಕಡೆ ಕೇಂದ್ರೀಕರಿಸಿತ್ತು.

ಎಷ್ಟು ಹೊತ್ತಾದರೂ ಸುಲ್ತಾನನ ಸುಳಿವೇ ಇಲ್ಲ. ಬಹಳ ಸಮಯದನಂತರ ಸುಲ್ತಾನನು ಕಿಟಕಿಯಬಳಿಗೆ ಬಂದನಾದರೂ ಅವನ ದೃಷ್ಟಿ ವಧ್ಯಸ್ಥಾನದತ್ತ ಹೊರಳಲಿಲ್ಲ. ದೂರದಲ್ಲಿ ಸವಾರಿಮಾಡಿಕೊಂಡು ಬರುತ್ತಿದ್ದ ಜಾಫರ ಮತ್ತು ಅವನ ಪರಿವಾರ ಸುಲ್ತಾನನ ಕಣ್ಣಿಗೆ ಬಿತ್ತು. ಆದುದರಿಂದ ಆತನು ಮತ್ತೆ ಒಳಗೆ ಹೋಗಿ ಭಟರೊಂದಿಗೆ "ನಮ್ಮ ನಗರಕ್ಕೆ ಬಾಗದಾದಿನಿಂದ ಯಾರೋ ಅಧಿಕಾರಿಗಳು ಬರುವಂತಿದೆ. ಅವರಿಗೆ ಉಚಿತ ಸ್ವಾಗತನೀಡಿ ನನಗೆ ಸುದ್ದಿ ಕಳುಹಿಸಿ " ಎಂದ.

ಅಲೀನೂರ್‌ಗೆ ಮರಣಶಿಕ್ಷೆ ವಿಧಿಸಲಾಯಿತೆಂದು ಜಾಫರಗೆ ಆಗಲೇ ತಿಳಿದುಬಿಟ್ಟಿತ್ತು. ಆತನು ಕಿಡಿಕಾರುತ್ತಾ ಸುಲ್ತಾನನಬಳಿಗೆ ಬಂದು "ಅಲೀನೂರ್‌ಗೆ ಅಪಾಯವೇನಾದರೂ ಆದರೆ ತಪ್ಪಿತಸ್ಥರ ತಲೆ ಹಾರಿಸಿಬಿಡುತ್ತೇನೆ, ಹುಷಾರ್, ಎಲ್ಲಿ ಅಲೀನೂರ್?"



ಎಂದು ಕಟುವಾಗಿ ನುಡಿದನು. ಸುಲ್ತಾನನ ಅಪ್ಪಣೆಯಂತೆ ಅಲೀನೂರನನ್ನು ವಧ್ಯಸ್ಥಾನದಿಂದ ಅರಮನೆಗೆ ಕರೆತಂದರು. ಜಾಫರ್ ಸುಲ್ತಾನನನ್ನೂ, ಆತನ ಮಂತ್ರಿ ಸಾವಿಯನ್ನೂ ಬಂಧಿಸುವಂತೆ ತನ್ನ ಭಟರಿಗೆ ಆಜ್ಞೆಯಿತ್ತು, ಅಲೀನೂರ್ ಬಸ್ರಾನಗರದ ಸುಲ್ತಾನನೆಂದು ಸಾರಿದನು. ಪ್ರಜೆಗಳು ಆನಂದ ತುಂದಿಲರಾದರು.

ಹೊಸ ಸುಲ್ತಾನನ ಗೌರವಾರ್ಥವಾಗಿ ಮೂರುದಿನ ವಿನೋದವಿಲಾಸಗಳು ನಡೆದುವು. ನಾಲ್ಕನೇಯದಿನ ಜಾಫರ್ ಬಾಗದಾದಿಗೆ ಹೊರಡಲು ಸಿದ್ಧನಾದನು. "ನಾನು ಖಲೀಪರ ದರ್ಶನ ಪಡೆಯಬೇಕು. ನಿಮ್ಮೊಂದಿಗೆ ಬರುತ್ತೇನೆ" ಎಂದ ಅಲೀನೂರ್. ಜಾಫರ್ ಒಪ್ಪಿಕೊಂಡ.

ಅವರು ಬಾಗದಾದನ್ನು ಸೇರಿಕೊಂಡ ಕೂಡಲೇ ಖಲೀಫರನ್ನು ಭೇಟಿಮಾಡಿದರು. ಜಾಫರ್ ಬಸ್ರಾನಗರದಲ್ಲಿ ನಡೆದುದನ್ನೆಲ್ಲಾ ಹೇಳಿದನು. ಖಲೀಫನು ಎಲ್ಲವನ್ನೂ ಕೇಳಿ ಅಲೀನೂರ್ ಕಡೆ ತಿರುಗಿ "ಅಲೀನೂರ್, ನಿನಗೆ ದ್ರೋಹವೆಸಗಿದ ಈ ಸಾವಿಯ ತಲೆಯನ್ನು ನೀನೇ ತುಂಡರಿಸಿ ಚೆಲ್ಲು" ಎಂದು ಆಜ್ಞಾಪಿಸಿದನು. ಅಲೀನೂರ್ ಕತ್ತಿಯನ್ನು ಹಿಡಿದು ಸಾವಿಯನ್ನು ಸಮೀಪಿಸಿದನು.

"ಅಲೀನೂರ್, ನಾನೇನೋ ದುಷ್ಟ ಪ್ರಕೃತಿಯವನು. ನನ್ನ ಪ್ರಕೃತಿಗೆ ಅನುಗುಣವಾದ ಕಾರ್ಯವನ್ನು ನಾನು ಮಾಡಿದೆ. ನೀನೋ ಸುಚರಿತನು. ನಿನ್ನ ಗುಣಕ್ಕೆ ತಕ್ಕ ಕೆಲಸ ನೀನು ಮಾಡು" ಎಂದು ದೈನ್ಯದಿಂದ ನುಡಿದನು. ಈ ಮಾತುಗಳನ್ನು ಕೇಳಿದ ಕೂಡಲೇ ಅಲೀನೂರ್‌ನ ಕೈಯಿಂದ ಖಡ್ಗ ಕಳಚಿ ಬಿತ್ತು. ಅಲೀನೂರನ ಔದಾರ್ಯವನ್ನು ಎಲ್ಲರೂ ಕೊಂಡಾಡಿದರು. ಖಲೀಫ ಸುಲ್ತಾನ ಮತ್ತು ಅವನ ಮಂತ್ರಿ ಸಾವಿಯನ್ನು ಕ್ಷಮಿಸಲೇ ಬೇಕಾಯಿತು. ಅಲೀನೂರ್ ಖಲೀಫನ ಅರಮನೆಯಲ್ಲಿ ಕೆಲವು ದಿನಗಳಿದ್ದನು. ನಂತರ ಅವನಿಗೆ ಅಪಾರ ಬಹುಮಾನಗಳನ್ನು ಖಲೀಫನು ಕೊಟ್ಟು ಬಸ್ರಾನಗರಕ್ಕೆ ಕಳುಹಿಸಿದನು. ಅಲೀನೂರ್ ಪ್ರಿಯಸಖಿಯೊಂದಿಗೆ ಅನೇಕ ವರ್ಷ ಸುಲ್ತಾನನಾಗಿದ್ದನು. (ಮುಗಿಯಿತು)





# ಉಪ್ಪುಕಷಾಯ

ಒಂದಾನೊಂದು ಕಾಲದಲ್ಲಿ ಸಂಕಣ್ಣ ಅಂತ ಒಬ್ಬನಿದ್ದ. ಅವನಿಗೆ ಒಬ್ಬ ಮಗ, ಒಬ್ಬ ಮಗಳೂ ಇದ್ದರು. ಕಾಲಕ್ರಮೇಣ ಮಗನಿಗೆ ಮದುವೆಯಾಗಿ ಸೊಸೆ ಮನೆಗೆ ಬಂದಳು. ಅಂದಿನಿಂದ ಮನೆಯಲ್ಲಿ ಹೆಂಗಸರು ಮೂವರಾದರು—ಸಂಕಣ್ಣನ ಹೆಂಡತಿ, ಮಗಳು ಮತ್ತು ಸೊಸೆ. ಮೂವರು ಹೆಂಗಸರು ಒಂದು ಮನೆಯಲ್ಲಿದ್ದರೆ ಅಡಿಗಡಿಗೆ ಯದ್ವಾ ತದ್ವಾ ಕೆಲಸಗಳು ನಡೆಯುತ್ತಿರುತ್ತವೆ. ಮನೆಯಲ್ಲಿ ತಾಯಿಮಗಳುಮಾತ್ರವಿದ್ದರೆ ಅವರಿಬ್ಬರ ರೀತಿ ನೀತಿಗಳು ಒಂದೇ ತರಹೆ ಇರುವುದು ಸರ್ವೇ ಸಾಮಾನ್ಯ. ಆದರೆ ಸೊಸೆ ಹೊರಗಿನವಳು. ಆಕೆಯ ಅಭ್ಯಾಸಗಳೇ ಬೇರೆ. ಆಕೆ ಕೆಲಸ ಮಾಡುವ ರೀತಿಯೇ ಬೇರೆ. ಆದುದರಿಂದ ಆ ಹುಡುಗಿಯನ್ನು ತಮ್ಮ ಸಂಪ್ರದಾಯದ ಪ್ರಕಾರ ನಡೆಯುವಂತೆ ಮಾಡಲು ತಾಯಿ ಮಗಳು ತುಂಬಾ ತಾಪತ್ರಯಪಡುತ್ತಿದ್ದರು. ಸೊಸೆ ಏನೂ ಅರಿಯದ ಮೂಢಳೆಂದು ಹೇಳಿದುದನ್ನೇ ಮತ್ತೆಮತ್ತೆ ಹೇಳುತ್ತಿದ್ದರು.

ಒಂದುದಿನ ಸಂಕಣ್ಣನ ಭಾವ ಅವರ ಮನೆಗೆ ಬಂದನು. ಯದ್ವಾತದ್ವಾ ನಡೆದುಕೊಂಡ ತನ್ನ ಅಣ್ಣನೇನಾದರೂ ತಿಳಿದುಕೊಳ್ಳಬಹುದೆಂದು ಸಂಕಣ್ಣನ ಪತ್ನಿ ಬಹಳ ಎಚ್ಚರಿಕೆ ವಹಿಸಿದ್ದಳು. ಆಕೆ ಕೊಡ ತೆಗೆದುಕೊಂಡು ಬಾವಿಗೆ ಹೋಗುವ ಮುನ್ನ ಸೊಸೆಯೊಂದಿಗೆ "ಲೇ, ಮೂಳಿ, ಒಲೆಮೇಲೆ ಹುಳಿ ಇಟ್ಟಿದ್ದೇನೆ. ಅದರಲ್ಲಿ ಒಂದು ಹಿಡಿ ಉಪ್ಪು ಹಾಕು. ಮರೆತು ಬಿಟ್ಟೀಯಾ ಜೋಕೆ" ಎಂದಳು.

ಎರಡು ದಿನಗಳಹಿಂದೆ ಸೊಸೆ ಸಾರಿನಲ್ಲಿ ಉಪ್ಪು ಹಾಕುವುದನ್ನು ಮರೆತು ಬಿಟ್ಟಿದ್ದಳು. ಆ ವಿಷಯ ನೆನಪಿಗೆ ತರುವ ಉದ್ದೇಶದಿಂದ ಅತ್ತೆ ಆ ರೀತಿ ಹೇಳಿದ್ದಳು. ಕೈಯಲ್ಲಿದ್ದ ಕೆಲಸ ಮುಗಿದಕೂಡಲೇ ಸೊಸೆ ಹುಳಿಯಲ್ಲಿ ಉಪ್ಪು ಹಾಕಿ ಬೇರೆ ಕಾರ್ಯದಲ್ಲಿ ಮಗ್ನಳಾದಳು. ಕೊಂಚ ಹೊತ್ತಾದನಂತರ ನಾದಿನಿ ಬೆರಣಿ ತಟ್ಟುವುದನ್ನು ಮುಗಿಸಿ, ಕೈತೊಳೆದುಕೊಂಡು ಅಡಿಗೆಮನೆಗೆ ಹೋಗಿ, ಒಲೆಯುಮೇಲಿದ್ದ ಹುಳಿಯನ್ನು ನೋಡಿದಳು.

ಎ. ಸುಂದರರಾವ್



"ಆ ತಿಳಿಗೇಡಿ ಉಪ್ಪು ಹಾಕುವುದನ್ನು ಮರೆತಿರುತ್ತಾಳೆ. ಮಾವಯ್ಯ ಬೇರೆ ಬಂದಿದ್ದಾರೆ" ಎಂದುಕೊಂಡು ಒಂದು ಹಿಡಿ ಉಪ್ಪು ಹುಳಿಯಲ್ಲಿ ಹಾಕಿ, ದನಕ್ಕೆ ಮೇವು ಹಾಕಲು ಹೋದಳು.

ಇಷ್ಟರಲ್ಲಿ ಅತ್ತೆ ನೀರಿನಕೊಡ ತೆಗೆದು ಕೊಂಡು ಬಂದಳು. ಒಲೆಯಮೇಲಿದ್ದ ಹುಳಿ ಯನ್ನು ನೋಡಿ "ಆ ಪೆದ್ದಳಿಗೆ ಮತ್ತೆಮತ್ತೆ ಜ್ಞಾಪಕ ಮಾಡುವುದಕ್ಕಿಂತಲೂ ನಾವೇ ಮಾಡಿಕೊಳ್ಳುವುದು ಉತ್ತಮ" ಎಂದು ಅಂದುಕೊಂಡು ಒಂದು ಹಿಡಿ ಉಪ್ಪು ತೆಗೆದು ಹುಳಿಯಲ್ಲಿ ಹಾಕಿದಳು. ಸಲ್ಪಹೊತ್ತಿಗೆ ಅಡುಗೆ ಕೆಲಸವೆಲ್ಲಾ ಮುಗಿಯಿತು.

ಮಧ್ಯಾಹ್ನ ಸಂಕಣ್ಣ ತನ್ನ ಭಾವನೊಂದಿಗೆ ಊಟಕ್ಕೆ ಕುಳಿತುಕೊಂಡ. ಭಾವ ಮೊದಲು ಹುಳಿಯನ್ನು ಕಲೆಸಿಕೊಂಡು ಒಂದು ತುತ್ತು ಬಾಯಿಗೆ ಹಾಕಿಕೊಂಡನು. "ಅರೆರೆ, ಹುಳಿ ಯಲ್ಲಿ ಉಪ್ಪು ಹಾಕುವುದನ್ನೇ ಮರೆತು ಬಿಟ್ಟಂತಿದೆ" ಎಂದು ಅಣಕವಾಡಿದ. ಕೂಡಲೇ ಸಂಕಣ್ಣನ ಸತಿ "ಅದೇಕಣ್ಣಾ, ನಾನೇ ಒಂದು ಹಿಡಿ ಉಪ್ಪು ಹಾಕಿದೆ. ನೆನೆಪಿದೆ" ಎಂದಳು.

ಅಲ್ಲೇ ನಿಂತಿದ್ದ ಮಗಳು "ನಾನೂ ಉಪ್ಪು ಹಾಕಿದೆನಮ್ಮಾ" ಎಂದಳು.

"ನೀವು ಉಪ್ಪು ಹಾಕುವಂತೆ ಸಾರಿಸಾರಿ ಹೇಳಿ ಹೋದಿರಿ. ನಾನೂ ಒಂದು ಹಿಡಿ ಉಪ್ಪು ಹಾಕಿದೆ" ಎಂದಳು ಸೊಸೆ.

"ಭಲೆ, ಹಾಗೆ ಹೇಳಿ. ಅದಕ್ಕೇ ಹುಳಿ ಉಪ್ಪುಕಷಾಯವಾಗಿದೆ" ಎಂದು ನಗೆ ಯಾಡಿದ ಭಾವ.

ತನ್ನ ಮನೆಯ ಹೆಂಗಸರನಡುವೆ ಪರಸ್ಪರ ಹೊಂದಾಣಿಕೆ ಇಲ್ಲದಿರುವುದನ್ನು ಕಂಡು ಸಂಕಣ್ಣ ಸಂಪತ್ತನಾದನು.

"ಇನ್ನುಮುಂದೆ ಮನೆಯಲ್ಲಿ ಪ್ರತಿ ಯೊಬ್ಬರೂ ಅವರವರ ಕೆಲಸ ನೋಡಿಕೊಳ್ಳ ಬೇಕೇ ಹೊರತು ಒಬ್ಬರ ಕೆಲಸವನ್ನು ಮತ್ತೊಬ್ಬರಿಗೆ ಹೇಳಬಾರದು, ಮಾಡ ಬಾರದು" ಎಂದು ಕಟ್ಟಾಜ್ಞೆಯಿತ್ತನು.

ಅಂದಿನಿಂದ ಮನೆಯಲ್ಲಿ ಯದ್ವಾತದ್ವಾ ನಡೆಯುವುದು ನಿಂತುಹೋಯಿತು.






# ದೌರ್ಭಾಗ್ಯ

ಒಂದೂರಿನಲ್ಲಿ ಇಬ್ಬರು ಸಹೋದರರಿದ್ದರು. ಅವರು ಮದುವೆಮಾಡಿಕೊಂಡು, ತಮ್ಮ ತಂದೆಯ ಆಸ್ತಿಯನ್ನು ಸಮವಾಗಿ ಹಂಚಿಕೊಂಡು ಬೇರೆಬೇರೆ ಸಂಸಾರ ಹೂಡಿದರು. ಆದರೆ ಕೊಂಚದಿನಗಳಲ್ಲಿ ಅವರಿಬ್ಬರ ಅದೃಷ್ಟ ಸಹ ಬೇರೆಯಾಯಿತು. ಕುಚೇಲ ಸಂತಾನದಂತೆ ಹಿರಿಯನಿಗೆ ವರ್ಷಂಪ್ರತಿ ಮಕ್ಕಳಾದರು. ಆಸ್ತಿಯೆಲ್ಲಾ ಕರಗಿತು. ಎರಡನೇಯವನಿಗೆ ದಿನ ಕೂಡಿಬಂತು. ಅವನು ಸಂಪನ್ನನಾದನು.

ಕಾಲಕ್ರಮೇಣ ಹಿರಿಯವನ ಪರಿಸ್ಥಿತಿ ತುಂಬಾ ಶೋಚನೀಯವಾಯಿತು. ಅವನಿಗೆ, ಅವನ ಮಡದಿ ಮಕ್ಕಳಿಗೆ ಉಟ್ಟುಕೊಳ್ಳಲು ಬಟ್ಟೆಯಿಲ್ಲ; ಹೊಟ್ಟೆತುಂಬಾ ಕುಡಿಯಲು ಗಂಜಿಯಿಲ್ಲ. ಬಹಳ ಕಷ್ಟ.

ಈ ಪರಿಸ್ಥಿತಿಯಲ್ಲಿ ಹಿರಿಯವನು ತನ್ನ ಅಭಿಮಾನವನ್ನು ಬದಿಗಿರಿಸಿ "ತಮ್ಮ, ನನ್ನ ಮಡದಿ ಮಕ್ಕಳೊಂದಿಗೆ ನಾನು ಹಸಿವಿನಿಂದ ನರಳುತ್ತಿದ್ದೇನೆ. ದೇವರದಯೆಯಿಂದ ನೀನು ಉತ್ತಮ ಸ್ಥಿತಿಯಲ್ಲಿರುವೆ. ನಿನಗೆ ತೋರಿದ ಸಹಾಯಮಾಡು. ನನಗಿನ್ನು ಯಾರೂ ಗತಿಯಿಲ್ಲ" ಎಂದು ತನ್ನ ಪರಿಸ್ಥಿತಿಯನ್ನು ತಮ್ಮನಲ್ಲಿ ಹೇಳಿಕೊಂಡನು.

ತಮ್ಮನು ಕೊಂಚಹೊತ್ತು ಯೋಚಿಸಿ "ಸಹಾಯ ಮಾಡಲೇನು ಅಭ್ಯಂತರವಿಲ್ಲ. ಆದರೆ ನನಗೂಸಹ ಭಾರಿ ಖರ್ಚುಗಳಿವೆ. ನಾಳೆ ನನ್ನಜನ್ಮೋತ್ಸವ. ಭೋಜನಕೂಟವೊಂದನ್ನು ಏರ್ಪಡಿಸಿರುವೆನು. ಊರಿನ ಗಣ್ಯಮಹನೀಯರೆಲ್ಲರಿಗೂ ಆಹ್ವಾನಗಳು ಹೋಗಿವೆ. ದೊಡ್ಡವರನ್ನು ಕರೆಯಬಾರದು, ಕರೆದಮೇಲೆ ಅಂತಸ್ತಿಗೆ ತಕ್ಕಂತೆ ಮರ್ಯಾದೆ ಮಾಡಬೇಕು. ಖರ್ಚೆಷ್ಟಾಗುವುದೋ ನೀನೇ ಯೋಚಿಸು. ಈ ಸಮಾರಂಭ ಕಳೆದನಂತರ ಏನಾದರೂ ಉಳಿದಿದ್ದರೆ ನಿನಗೆ ಕೊಡಲು ಅಭ್ಯಂತರವೇನಿಲ್ಲ. ನೀನೂ, ಅತ್ತಿಗೆ ಮತ್ತು ಮಕ್ಕಳು ಬನ್ನಿ. ಈ ವಿಷಯನಂತರ ಸಾವಧಾನವಾಗಿ ಮಾತನಾಡೋಣ" ಎಂದನು.

"ನೀನು ವೈಭವವಾಗಿ ಹುಟ್ಟಿದ ಹಬ್ಬ ಮಾಡಿಕೊಳ್ಳುತ್ತಿರಲು, ಈ ಚಿಂದಿ ಬಟ್ಟೆ

ಜಿ. ಗೋವಿಂದ



ಗಳನ್ನು ಹಾಕಿಕೊಂಡು ನಾನು ಹೇಗೆತಾನೇ ಬರಲಿ?'' ಎಂದು ಕೇಳಿದ ಅಣ್ಣ.

"ಅದೆಂತಹ ಮಾತು. ಬಡತನವಾದ ಮಾತ್ರಕ್ಕೆ ಏನಾಗಿಹೋಯಿತು? ನೆಂಟಸ್ಥನ ಉಳಿಯುವುದಿಲ್ಲವೇ? ನಾವಿಬ್ಬರೂ ಒಬ್ಬ ತಾಯಿಯ ಮಕ್ಕಳಲ್ಲವೇ?'' ಎಂದು ಕಳ ಕಳಿಯಿಂದ ನುಡಿದ ತಮ್ಮ.

ಅಣ್ಣ ಆನಂದದಿಂದ ಮನೆಗೆಹೋಗಿ ತನ್ನ ಹೆಂಡತಿಯೊಂದಿಗೆ "ನಾಳೆ ನಮ್ಮ ತಮ್ಮನ ಹುಟ್ಟಿದ ಹಬ್ಬವಂತೆ. ನಾವೆಲ್ಲರೂ ಔತಣಕ್ಕೆ ಬರಬೇಕಂತೆ. ಸಾರಿಸಾರಿ ಹೇಳಿದ'' ಎಂದ.

"ಚೆನ್ನಾಯಿತು. ಈ ಹರಕಲುಬಟ್ಟೆ ಹಾಕಿಕೊಂಡು ಹೋದರೆ ನೋಡಿ ಎಲ್ಲರೂ ನಗುತ್ತಾರೆ,'' ಎಂದಳು ಹೆಂಡತಿ.

"ಕರೆದಾಗ ಹೋಗದಿದ್ದರೆ ಅವನು ನೊಂದುಕೊಳ್ಳುತ್ತಾನೆ. ನಮ್ಮ ಪರಿಸ್ಥಿತಿ ಪ್ರಪಂಚಕ್ಕೇ ತಿಳಿದಿದೆ'' ಎಂದ ಗಂಡ.

ಮಾರನೇಯದಿನ ಅಣ್ಣನ ಕುಟುಂಬವೆಲ್ಲಾ ತಮ್ಮನ ಮನೆಗೆ ಹೋದರು. ಮನೆಯೆಲ್ಲಾ ಆಹ್ವಾನಿತರಿಂದ ಕಿಕ್ಕಿರಿದಿತ್ತು. ಆ ಗಲಾಟೆಯಲ್ಲಿ ಅಣ್ಣ, ಅತ್ತಿಗೆ ಮತ್ತು ಮಕ್ಕಳನ್ನು ಯಾರೂ ಗಮನಿಸಲಿಲ್ಲ; ಆದರಿಸಲಿಲ್ಲ. ನೌಕರರೂ ಸಹ ಅವರನ್ನು ಕಣ್ಣೆತ್ತಿ ನೋಡಲಿಲ್ಲ. ಎಲೆ ಹಾಕಿದಮೇಲೂ ಯಾರೂ ಅವರನ್ನು ಊಟಕ್ಕೆ ಕರೆಯಲಿಲ್ಲ. ಕೊನೆಯ ಪಂಕ್ತಿಯಲ್ಲೂ ಅವರಿಗೆ ಸ್ಥಳವಿರಲಿಲ್ಲ.

ಅಣ್ಣನ ಆಶೆ ನಿರಾಶೆಯಾಯಿತು. ಅವನು ಕುಟುಂಬಸಮೇತನಾಗಿ ಕ್ಷುದ್ಬಾಧೆಯಿಂದಲೇ ಮನೆಗೆ ಹಿಂತಿರುಗಿದನು. ಆಗ ದಾರಿಯಲ್ಲಿ ಅವರಹಿಂದೆ ಯಾರೋ ಒಬ್ಬ ವ್ಯಕ್ತಿ ನಡೆದುಕೊಂಡು ಬರುತ್ತಿದ್ದನು.

"ನಮ್ಮನ್ನು ಯಾರೋ ಹಿಂಬಾಲಿಸುತ್ತಿದ್ದಾರೆ. ಪ್ರಪಂಚವೆಲ್ಲಾ ನಮ್ಮನ್ನು ಅಸಡ್ಡೆಯಿಂದ ಕಂಡರೂ ಈತನು ನಮ್ಮ ಹಿಂದೆಯೇ ಬರುತ್ತಿದಾನಲ್ಲ!'' ಎಂದಳು ಅಣ್ಣನ ಹೆಂಡತಿ ವಿಸ್ಮಯದಿಂದ.

"ಅವನು ನಮ್ಮ ದೌರ್ಭಾಗ್ಯನಾಗಿರಬೇಕು'' ಎಂದ ಗಂಡ.

ಅವನು ಬೇಸರದಿಂದ ನುಡಿದಮಾತು ನಿಜವೇ ಆಗಿತ್ತು. ಆ ವ್ಯಕ್ತಿ ಅವರ ದೌರ್ಭಾಗ್ಯನೇ ಆಗಿದ್ದ! ಆ ವ್ಯಕ್ತಿಯನ್ನು





ಅವರೆಂದೂ ಕಂಡಿರಲಿಲ್ಲ. ಆದರೆ ಅವನು ಮಾತ್ರ ಮತ್ತೆ ಅವರ ಹಿಂದೆ ಹಿಂದೆಯೇ ಬಿಡದೆ ಸುಳಿದಾಡುತ್ತಿದ್ದಾನೆ.

ಮಾರನೇಯದಿನ ಮುಂಜಾನೆ ಅಣ್ಣ ಮನೆಯಬಾಗಿಲು ತೆರದಕೂಡಲೇ ಹೊಸಲಿನ ಬಳಿ ಆ ದೌರ್ಭಾಗ್ಯನ ಮೂರ್ತಿ ಕುಳಿತಿರುವುದು ಕಾಣಿಸಿತು.

"ನೋಡು. ಈ ಪ್ರಪಂಚದಲ್ಲಿ ಸುಖವೆಂಬುದೇ ಇಲ್ಲ. ನೀನೇಕೆ ಚಿಂತಿಸುವೆ? ಹೋಗಿ ಸಾರಾಯಿ ಕುಡಿದು ಆನಂದಿಸೋಣ ಬಾ" ಎಂದ ದೌರ್ಭಾಗ್ಯ.

"ನನ್ನಬಳಿ ಹಣವಿಲ್ಲ" ಎಂದ ಅಣ್ಣ.

"ನಿನ್ನ ಹಳೇ ಕಂಬಳಿ ಮಾರಿದರಾಯಿತು. ಚಳಿಗಾಲ ಹೋಯಿತು. ಮತ್ತೆ ಚಳಿಗಾಲ ಬರುವತನಕ ಜೀವಿಸಿದ್ದರೆ ನೋಡಿಕೊಳ್ಳೋಣ" ಎಂದ ದೌರ್ಭಾಗ್ಯ.

ಅಣ್ಣನು ಮನೆಯೊಳಗೆ ಹೋಗಿ ಕಂಬಳಿ ತಂದ. ಅದನ್ನು ಮಾರಿ ಬಂದ ಹಣದಿಂದ ಇಬ್ಬರೂ ಕಂಠಪೂರ್ತಿ ಕುಡಿದರು.

ಅಂದಿನಿಂದ ಅಣ್ಣನು ಮನೆಯಲ್ಲಿದ್ದ ಒಂದೊಂದೇ ಸಾಮಾನನ್ನು ಮಾರಿ, ಆ ಹಣದಿಂದ ಕುಡಿಯಲು ಪ್ರಾರಂಭಿಸಿದನು. ದೌರ್ಭಾಗ್ಯ ರಾತ್ರಿ ಹಗಲು ಅವನಸಂಗಡವಿರುತ್ತಾನೆ. ಅವನನ್ನು ಮತ್ತಷ್ಟು ಅಧೋಗತಿಗಿಳಿಸುತ್ತಿದ್ದಾನೆ. ಈ ವಿಷಯ ಅಣ್ಣನಿಗೆ ತಿಳಿದೂ ಸಹ ತಾನಾಗಿ ಏನೂ ಮಾಡಲಾರದೆ ಸುಮ್ಮನಿದ್ದನು.

ಕಡೆಗೊಂದು ದಿನ ಅಣ್ಣನಬಳಿ ಏನೂ ಉಳಿಯಲಿಲ್ಲ. ಎಲ್ಲಿಯಾದರೂ ಕೂಲಿನಾಲಿ ಮಾಡಿ ಎರಡು ಕಾಸು ಸಂಪಾದಿಸೋಣವೆಂದು ಯೋಚಿಸಿದರೆ ದೌರ್ಭಾಗ್ಯ ಅವನನ್ನು ನಿರುತ್ಸಾಹಗೊಳಿಸುತಿದ್ದ.

"ಈ ಹಾಳು ದೌರ್ಭಾಗ್ಯಕ್ಕೆ ಎದುರುಬೀಳದಹೊರತು ನಾನು ತಲೆಯೆತ್ತುವಂತಿಲ್ಲ" ಎಂದುಕೊಂಡ ಅಣ್ಣ.

ಒಂದು ದಿನ ಅವರಿಬ್ಬರೂ ಹೊಲಗಳ ನಡುವೆ ನಡೆಯುತ್ತಿರಲು ಒಂದುಕಡೆ ಭಾರಿ ಕಲ್ಲೊಂದು ಕಾಣಿಸಿತು. "ಸುತ್ತಮುತ್ತ ಎಲ್ಲೂ ಬೆಟ್ಟಗುಡ್ಡಗಳಿಲ್ಲ. ಇಷ್ಟೊಂದು ಭಾರಿ ಕಲ್ಲು ಇಲ್ಲಿಗೆ ಹೇಗೆ ಬಂತು? ಯಾರೋ ಅದನ್ನು ಇಲ್ಲಿಗೆ ಬೇಕೆಂತಲೇ ತಂದಿಟ್ಟದ್ದಾರೆ.

ಒಂದುವೇಳೆ ಅದರ ಕೆಳಗೆ ನಿಧಿಯಿರಬಹುದು. ಯಾರು ಹೇಳಬಲ್ಲರು " ಎಂದ ಅಣ್ಣ.

" ನಿನಗೊಂದು ಭ್ರಾಂತು. ಇಲ್ಲೇಕೆ ನಿಧಿಯಿರುತ್ತದೆ. ಇದ್ದರೂ ಅದು ನಿನ್ನ ಮತ್ತು ನನ್ನ ಕಣ್ಣಿಗೆ ಕಾಣಿಸುವುದೇ? ನಮ್ಮ ಹಣೆಯಲ್ಲಿ ಅಷ್ಟೊಂದು ಭಾಗ್ಯ ಬರೆದಿದೆಯಾ?" ಎಂದ ದೌರ್ಭಾಗ್ಯ.

ಆದರೆ ಅಣ್ಣ ಅವನ ಮಾತನ್ನು ಲಕ್ಷ್ಯ ಮಾಡಬಾರದೆಂದು ಆಗಲೇ ನಿರ್ಧರಿಸಿದ್ದನು. ಕೂಡಲೇ ಗ್ರಾಮಕ್ಕೆ ಹೋಗಿ ಒಬ್ಬ ರೈತನಿಂದ ಎತ್ತಿನ ಗಾಡಿಯನ್ನು ಎರವಲು ಪಡೆದು ಕಲ್ಲುಬಂಡೆಯಿದ್ದ ಜಾಗಕ್ಕೆ ಬಂದನು. ದಾರಿಯುದ್ದಕ್ಕೂ ದೌರ್ಭಾಗ್ಯ ಅವನನ್ನು ಅಣಕವಾಡುತ್ತಿದ್ದನು. ಆದರೆ ಅಣ್ಣ ಅವನ ಮಾತಿಗೆ ಸ್ವಲ್ಪವೂ ಕಿವಿಕೊಡಲಿಲ್ಲ.

ಬಂಡೆಯ ಬಳಿಗೆ ಗಾಡಿಯನ್ನು ತಂದು ನಿಲ್ಲಿಸಿ, ದೌರ್ಭಾಗ್ಯನನ್ನು ಕುರಿತು " ಎಲ್ಲಿ ಹಿಡಿ. ಈ ಕಲ್ಲನ್ನು ಒಂದುಕಡೆ ನೂಕೋಣ" ಎಂದ ಅಣ್ಣ. ಇಬ್ಬರೂ ಸೇರಿ ಆ ಕಲ್ಲುಬಂಡೆಯನ್ನು ಒಂದು ಪಕ್ಕಕ್ಕೆ ತಳ್ಳಿದರು. ಅಣ್ಣ ನೆನೆಸಿದಂತೆಯೇ ಆ ಬಂಡೆಯ ಕೆಳಗೆ ಒಂದು ಹಳ್ಳವಿತ್ತು. ಅದರ ತುಂಬಾ ಚಿನ್ನದ ನಾಣ್ಯಗಳಿದ್ದುವು. ಇಬ್ಬರೂ ಆ ಬಂಗಾರವನ್ನು ಬಾಚಿ ಗಾಡಿಗೆ ಹೇರಿದರು.

" ಇನ್ನು ಏನಾದರೂ ಉಳಿದಿವೆಯೇನೋ ನೋಡು " ಎಂದ ಅಣ್ಣ.

" ನೋಡಲಗತ್ಯವಿಲ್ಲ. ಒಳಗೇನೂ ಇರುವಂತೆ ಕಾಣಿಸದು " ಎಂದ ದೌರ್ಭಾಗ್ಯ.

" ಹಳ್ಳದಲ್ಲಿ ಇಳಿದು ಒಮ್ಮೆ ನೋಡಬಾರದೆ? ಎಲ್ಲೋ ಒಂದೆರಡು ನಾಣ್ಯಗಳಿರಬಹುದು. ವೃಥಾ ಅವನ್ನೇಕೆ ಬಿಡಬೇಕು. ಇಳಿ, ಇಳಿ " ಎಂದ ಅಣ್ಣ.

ದೌರ್ಭಾಗ್ಯ ಗೊಣಗುಟ್ಟಿಕೊಂಡು ಹಳ್ಳದಲ್ಲಿ ಇಳಿದು ಬಗ್ಗಿ ನೋಡುತ್ತಿರಲು ಅಣ್ಣನು ಕಲ್ಲುಬಂಡೆಯನ್ನು ಯಥಾಸ್ಥಾನಕ್ಕೆ ತಳ್ಳಿ, ಗಾಡಿಹತ್ತಿ ಮನೆಗೆ ಹೊರಟುಬಿಟ್ಟನು. ದೌರ್ಭಾಗ್ಯದ ಪೀಡೆ ಕಳೆಯಿತು.

ತದನಂತರ ಅಣ್ಣನು ತನ್ನ ಹೆಂಡತಿ ಮತ್ತು ಮಕ್ಕಳೊಂದಿಗೆ ಸುಖವಾಗಿ ಜೀವನ ಮಾಡಿಕೊಂಡಿದ್ದನು.






## 11

[ ಟ್ರಾಯ್‌ಯುದ್ಧ ಮುಗಿದನಂತರ ತನ್ನ ಸ್ವದೇಶವಾದ ಇಥಾಕಾ ಸೇರಲು ಹೊರಟ ರೂಪಧರನು ಅನೇಕ ವರ್ಷ ಕಷ್ಟಗಳನ್ನು ಅನುಭವಿಸಿ, ಅಪಾಯಗಳಿಗೆ ಸಿಕ್ಕಿ ತನ್ನ ಅನುಚರರನ್ನೆಲ್ಲಾ ಕಳೆದುಕೊಂಡು, ಒಂಟಿಯಾಗಿ ಸ್ವದೇಶವನ್ನು ಸೇರಿಕೊಂಡನು. ಆದರೆ ಆತನ ಕಷ್ಟಗಳು ಮುಗಿದಿರಲಿಲ್ಲ. ಆತನ ಇಷ್ಟದೇವತೆ ಬುದ್ಧಿಮತಿದೇವಿ ಆತನಿಗೆ ಹಾನಿಯಾಗದಿರಲು ಅವನು ವೃದ್ಧನಾಗಿ ಕಾಣುವಂತೆ ಮಾಡಿದಳು. ಇಷ್ಟರಲ್ಲಿ ಇಥಾಕಾದಲ್ಲಿ—]

ಟ್ರಾಯ್ ಯುದ್ಧದಿಂದ ಗ್ರೀಕರು ಹಿಂತಿರುಗಿದನಂತರ ರೂಪಧರನು ದಾರಿಯಲ್ಲಿ ಸತ್ತನೆಂದು ಸುದ್ದಿ ಹಬ್ಬಿತು. ಇಥಾಕಾ ಮತ್ತು ನೆರೆಹೊರೆ ದ್ವೀಪಗಳಲ್ಲಿದ್ದ ರಾಜಕುಮಾರರು ರೂಪಧರನ ಮನೆಗೆ ಬಂದು ಸೇರಿದರು. ರೂಪಧರನ ಮಡದಿ ಪದ್ಮಮುಖಿ ಅತ್ಯಂತ ಚೆಲುವೆ. ಆಕೆಯನ್ನು ವಿವಾಹವಾಗಿ, ಇಥಾಕಾ ದೇಶದ ಅರಸನಾಗಬೇಕೆಂದು ಪ್ರತಿಯೊಬ್ಬನ ಉದ್ದೇಶವಾಗಿತ್ತು.

ಧೀರಮತಿ ಆಗಲೇ ಯೌವನದಲ್ಲಿ ಕಾಲಿಡುತ್ತಿದ್ದನು. ಅವನು ಹಸುಳೆಯಾಗಿದ್ದಾಗಲೇ ರೂಪಧರನು ಯುದ್ಧಕ್ಕೆ ಹೊರಟುಬಿಟ್ಟಿದ್ದನು. ಅಂತಲೇ ಧೀರಮತಿ ಬುದ್ಧಿ ತಿಳಿದಮೇಲೆ ತಂದೆಯನ್ನು ಕಂಡಿರಲಿಲ್ಲ. "ನಮ್ಮ ತಂದೆಯ ಮರಣ ವಾರ್ತೆ ನಂಬಲರ್ಹವಾದ ಕಡೆಯಿಂದ ತಿಳಿದುಬಂದರೂ ಒಳಿತು. ನಮ್ಮ ತಾಯಿ ಯಾರಾದರೊಬ್ಬನನ್ನು ಆರಿಸಿಕೊಂಡು ಮದುವೆಯಾಗುತ್ತಾಳೆ. ಆಗ ಈ ಪುಂಡರ

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ



ಕಾಟ ತಪ್ಪುತ್ತದೆ" ಎಂದು ಯೋಚಿಸಿದನು. ರಾಜಕುಮಾರರೆಲ್ಲ ಧೀರಮತಿ ಅಸಹಾಯಕನೆಂದು ಅರಿತು, ಅವನ ಮನೆಯಲ್ಲೇ ನಿಂತು, ರೂಪಧರನ ಪಶುಗಣಗಳನ್ನು ಕೊಂದು ತಿಂದು, ಕುಡಿದು ಕುಣಿಯುತ್ತಿದ್ದರು. ಪ್ರತಿಯೊಬ್ಬರೂ ಪದ್ಮಮುಖಿ ತಮ್ಮ ಹೆಂಡತಿಯಾಗುವಳೆಂದು ಜಂಬಕೊಚ್ಚಿಕೊಳ್ಳುತ್ತಿದ್ದರು. ಅವರ ಕಾಟದಿಂದ ಬಿಡಿಸಿಕೊಳ್ಳಲು ಧೀರಮತಿಗೆ ಉಪಾಯಕಾಣಲಿಲ್ಲ.

ಪದ್ಮಮುಖಿಗೆಮಾತ್ರ ತನ್ನ ಗಂಡನು ಸ್ವದೇಶಕ್ಕೆ ಹಿಂತಿರುಗುವನೆಂಬ ನಂಬಿಕೆಯಿತ್ತು. ರೂಪಧರನುಇಥಾಕಾಕ್ಕೆ ಬರಲಿರುವನೆಂದು ಒಬ್ಬಾನೊಬ್ಬ ಭವಿಷ್ಯವಾದಿ ನುಡಿದಿದ್ದನು. ಆದರೆ ಅಲ್ಲಿಗೆ ಬಂದಿದ್ದ ರಾಜಕುಮಾರರು ಮಾತ್ರ ರೂಪಧರನು ಸತ್ತುಹೋದನೆಂದು ಸಾಧಿಸಿ, ಆಕೆಯನ್ನು ವಿವಾಹಮಾಡಿಕೊಳ್ಳುವಂತೆ ಪೀಡಿಸುತ್ತಿದ್ದರು. ಅವರ ಕಾಟದಿಂದ ತಪ್ಪಿಸಿಕೊಳ್ಳಲು ಆಕೆಯೊಂದು ಉಪಾಯ ಹೂಡಿದಳು. "ನಾನು ನಮ್ಮ ಮಾವಂದಿರ ಶವದಮೇಲೆ ಹಾಸಲು ಒಂದು ಬಟ್ಟೆ ನೇಯುತ್ತಿದ್ದೇನೆ. ಅದು ಪೂರ್ತಿಯಾದನಂತರ ಸ್ವಯಂವರ ಮಾಡಿಕೊಳ್ಳುತ್ತೇನೆ" ಎಂದಳು. ರಾಜಕುಮಾರರು ಆಕೆಯ ಸಲಹೆಗೆ ಸಮ್ಮತಿಸಿದರು.

ಅಂದುಮೊದಲುಗೊಂಡು ಪದ್ಮಮುಖಿ ಹಗಲೆಲ್ಲಾ ಬಟ್ಟೆ ನೇಯುವಳು. ರಾತ್ರಿ ಹೊತ್ತು ನೇದುದನ್ನೆಲ್ಲಾ ಬಿಚ್ಚಿಬಿಡುವಳು. ಹೀಗೆ ಮೂರು ವರ್ಷಗಳು ಸಾಗಿದುವು.



ಕಡೆಗೆ ಒಂದು ದಿನ ರಾಜಕುಮಾರರು ಆಕೆ ಮಾಡುವ ಮೋಸವನ್ನು ಕಂಡುಹಿಡಿದುಬಿಟ್ಟರು. ಆಗ ಅವರ ಕೋಪ ಮಿತಿಮೀರಿತು.

ಇದನ್ನು ಕಂಡು ಧೀರಮತಿ ಒಂದು ನಿರ್ಣಯಕ್ಕೆ ಬಂದನು. ಅವನು ಪೈಲಾಸ್‌ನಲ್ಲಿದ್ದ ನವದ್ಯೋತ, ಸ್ಪಾರ್ಟಾದಲ್ಲಿದ್ದ ಪ್ರತಾಪರನ್ನು ಭೇಟಿಮಾಡಿ ತನ್ನ ತಂದೆಯ ವಿಷಯವನ್ನು ತಿಳಿದುಕೊಳ್ಳಲು ನಿಶ್ಚಯಿಸಿದನು. ಟ್ರಾಯ್ ಯುದ್ಧಕ್ಕೆ ಹೋಗಿ ಹಿಂತಿರುಗಿದವರಲ್ಲಿ ಪ್ರತಾಪನೇ ಕೊನೆಯವನು. ಆದುದರಿಂದ ಆತನಿಗೆ ತನ್ನ ತಂದೆಯ ವಿಷಯ ಕೊಂಚವಾದರೂ ತಿಳಿದಿರಬಹುದೆಂದು ಅವನ ಊಹೆ.

"ನನ್ನ ತಂದೆ ಮರಣಹೊಂದಿರುವುದು ಸತ್ಯವಾಗಿದ್ದರೆ ಅವರಿಗೆ ಉತ್ತರಕ್ರಿಯೆಗಳನ್ನು ನಡೆಯಿಸಿ, ನಂತರ ನನ್ನ ತಾಯಿಯ ಸ್ವಯಂವರವನ್ನು ನಡೆಯಿಸುವೆನು. ಇನ್ನು ಬಹಳ ಕಾಲ ಈ ದುರುಳರ ಕಾಟವನ್ನು ತಡೆಯಲು ನನ್ನಿಂದ ಸಾಧ್ಯವಿಲ್ಲ. ನನ್ನ ವಯಸ್ಸಿನ ಯುವಕರು ಶೌರ್ಯ, ಪರಾಕ್ರಮಗಳನ್ನು ತೋರುತ್ತಿದ್ದಾರೆ. ನಮ್ಮ ತಂದೆ ಜೀವಿಸಿದ್ದರೆ ಈ ದುರುಳರನ್ನು ಕ್ಷಣಮಾತ್ರದಲ್ಲಿ ನಿರ್ಮೂಲ ಮಾಡಿಬಿಟ್ಟೇನು" ಎಂದುಕೊಂಡ ಧೀರಮತಿ.

ಈ ರೀತಿ ನಿರ್ಧರಿಸಿ ಧೀರಮತಿ ಒಂದು ದಿನ ರಾಜಕುಮಾರರನ್ನು ಉದ್ದೇಶಿಸಿ "ಆರ್ಯರೇ, ನೀವೆಲ್ಲರೂ ನಮ್ಮ ತಾಯಿಯನ್ನು ಮದುವೆಯಾಗಲು ಆಸಕ್ತಿಹೊಂದಿರುವಿರಿ. ಸರಿ. ಆದರೆ ನಿಮ್ಮ ವರ್ತನೆ ನನಗೇಕೋ ಹಿಡಿಸಲಿಲ್ಲ. ನಾಳೆ ನಾನೊಂದು ಸಭೆ ಸೇರಿಸುತ್ತೇನೆ.

CHITRA



ಅಲ್ಲಿ ನೀವೆಲ್ಲರೂ ನಮ್ಮ ಮನೆಯಿಂದ ಹೊರಟು ಹೋಗಬೇಕೆಂದು ಬಹಿರಂಗವಾಗಿ ಕೋರುವವನಿದ್ದೇನೆ. ನಿಮ್ಮ ನಿಮ್ಮ ಮನೆಗಳಲ್ಲಿ ತಿಂದು ತೇಗಿ, ಕುಡಿದು ಕುಣಿಯಿರಿ. ಇಲ್ಲಿ ನಿಮ್ಮ ಕಿಡಿಗೇಡಿತನ ಸಾಗಿಸುವಹಾಗಿದ್ದರೆ ನಾಶವಾಗುವಿರಿ, ಖಂಡಿತ" ಎಂದು ಎಚ್ಚರಿಸಿದನು.

ಅಕಸ್ಮಾತ್ತಾಗಿ ಯುವಕನು ಪ್ರದರ್ಶಿಸಿದ ದಿಟ್ಟತನ ಆ ದುರುಳರನ್ನು ಬೆರಗುಗೊಳಿಸಿತು. ಮಾರನೇಯ ದಿನ ಬೆಳಗ್ಗೆ ಇಥಾಕಾ ಪ್ರಜೆಗಳೆಲ್ಲಾ ಸಭೆಸೇರಬೇಕೆಂದು ಧೀರಮತಿ ಡಂಗುರ ಹೊಡೆಯಿಸಿದನು. ಕೈಯಲ್ಲಿ ಭರ್ಚಿಯನ್ನು ಹಿಡಿದು, ಎರಡು ನಾಯಿಗಳನ್ನು ಸಂಗಡ ಕರೆದುಕೊಂಡು ಧೀರಮತಿ ದಿಟ್ಟತನದಿಂದ ಮಾರನೇಯ ದಿನ ಸಭೆಗೆ ಹೋದನು.



ಅಲ್ಲಿ ನೆರೆದಿದ್ದ ಹಿರಿಯರು ಧೀರಮತಿಯನ್ನು ಅವನ ತಂದೆ ಅಲಂಕರಿಸುತ್ತಿದ್ದ ಪೀಠದಲ್ಲಿ ಕೂರಿಸಿದರು. ಎಲ್ಲರೂ ಆಸೀನರಾದನಂತರ ವಯೋವೃದ್ಧ ಐಗುಪ್ತನು ಎದ್ದು ನಿಂತು ಸಭೆಯನ್ನು ಉದ್ದೇಶಿಸಿ ಮೊದಲು ಮಾತನಾಡಿದನು. ಈತನ ಕುಮಾರರಲ್ಲಿ ಒಬ್ಬನು ರೂಪಧರನ ಅನುಚರನು. ಫಾಲಲೋಚನನ ಬಾಯಿಗೆ ತುತ್ತಾದವರಲ್ಲಿ ಆತನೂ ಒಬ್ಬನು. ಈತನ ಮತ್ತೊಬ್ಬ ಕುಮಾರನು ಈಗ ಪದ್ಮಮುಖಿಯನ್ನು ವಿವಾಹವಾಗಲು ಬಯಸಿರುವ ರಾಜಕುಮಾರರಲ್ಲೊಬ್ಬನು.

ಐಗುಪ್ತನು ಹೀಗೆಂದನು: "ಸಹೋದರರೇ, ದೇಶಬಾಂಧವರೇ, ಈ ಸಮಾವೇಶವನ್ನು ಏರ್ಪಡಿಸಿದವರು ಯಾರೋ ನಾನರಿಯೆ. ಆದರೂ ಅವರು ಉತ್ತಮ ಕೆಲಸ ಮಾಡಿದರು. ಯಾಕೆಂದರೆ ರೂಪಧರನು ಯುದ್ಧಕ್ಕೆ ಹೋದನಂತರ ಇಥಾಕಾದಲ್ಲಿ ಹೀಗೆ ನಾವೆಲ್ಲರೂ ಸಮಾವೇಶವಾದುದೇ ಇಲ್ಲ. ಇಂದು ನಾವೆಲ್ಲರೂ ಏಕೆ ಸಭೆಸೇರಿರುವೆವೋ ತಿಳಿಯಲು ನಾನೂ ಕುತೂಹಲನಾಗಿದ್ದೇನೆ."

ವೃದ್ಧನ ಈ ಪೀಠಿಕೆ ಧೀರಮತಿಗೆ ಉತ್ಸಾಹವನ್ನುಂಟು ಮಾಡಿತು. ಅವನು ಎದ್ದು ನಿಂತು "ದೇಶಬಾಂಧವರೇ, ಈ ಸಮಾವೇಶವನ್ನು ಏರ್ಪಡಿಸಿದವನು ನಾನು. ಕೇವಲ ನನ್ನ ಸ್ವಂತ ಕಷ್ಟಸುಖಗಳನ್ನು ನಿಮ್ಮಲ್ಲಿ ಅರಿಕೆ ಮಾಡಿಕೊಳ್ಳಲು ನಿಮ್ಮನ್ನು ಆಹ್ವಾನಿಸಿರುವೆನು. ನಮ್ಮ ಮನೆಗೆ ಎರಡು ಅನಿಷ್ಟಗಳು



ಪ್ರಾಪ್ತವಾಗಿವೆ. ಒಂದು, ನಾನು ಪ್ರಸಿದ್ಧನಾದ ತಂದೆಯನ್ನು ಕಳೆದುಕೊಂಡೆ. ಆತನು ಒಂದಾನೊಂದು ಕಾಲದಲ್ಲಿ ನಿಮ್ಮೆಲ್ಲರ ಅರಸನಾಗಿದ್ದನು. ಮತ್ತೊಂದು, ನನ್ನ ತಾಯಿಯನ್ನು ಮದುವೆಯಾಗುವ ಉದ್ದೇಶದಿಂದ ಅನೇಕರು ನಮ್ಮ ಮನೆ ಸೇರಿ, ನಮ್ಮ ಸೊತ್ತನ್ನೆಲ್ಲಾ ತಿಂದು ಹಾಳುಮಾಡುತ್ತಿರುವರು. ಶೀಘ್ರದಲ್ಲೇ ನಾನು ಬಿಕಾರಿಯಾಗುವ ಪರಿಸ್ಥಿತಿಯೊದಗಬಹುದೆಂದು ಹೆದರಿಕೆಯಾಗುತ್ತಿದೆ. ಈ ಪುಂಡತನ ಮಾಡುತ್ತಿರುವವರಲ್ಲಿ ಕೆಲವರು ಇಲ್ಲಿ ನೆರೆದಿರುವ ಗಣ್ಯಮಹನೀಯರ ಪುತ್ರರು. ನಮ್ಮ ತಾತಂದಿರಬಳಿಗೆ ಹೋಗಿ ನಮ್ಮ ತಾಯಿಯನ್ನು ವಿವಾಹಮಾಡಿಕೊಡುವಂತೆ ಕೇಳುವ ಎದೆಗಾರಿಕೆ ಯಾರೊಬ್ಬರಿಗೂ ಇಲ್ಲ. ನನ್ನ ಮನೆಗೆ ನುಗ್ಗಿ ನಮ್ಮ ಪಶುಗಳನ್ನು ಇಷ್ಟಬಂದಂತೆ ಕೊಂದು ತಿಂದು, ಮನೆಯಲ್ಲಿರುವ ಮಧು ಕುಡಿದು ಕುಣಿದಾಡುವರು. ನಮ್ಮ ತಂದೆಯವರಿಲ್ಲದಿರುವುದರಿಂದ ನಮ್ಮ ಮನೆ ನಾಯಿಗಳ ಕೊಟ್ಟಿಗೆಯಾಗಿಬಿಟ್ಟಿದೆ. ನಮ್ಮ ತಂದೆ ದೇಶಕ್ಕೆ ಯಾವ ದ್ರೋಹ ಬಗೆದರೆಂದು ಈ ಶಿಕ್ಷೆ? ಇಥಾಕಾದೇಶದ ಪ್ರಜೆಗಳೆಲ್ಲಾ ತಲೆತಗ್ಗಿಸಬೇಕಾದ ವಿಷಯವಿದು'' ಎಂದನು.

ಕೂಡಲೇ ದುರ್ಬುದ್ಧಿ ಎಂಬ ಯುವಕನು ಎದ್ದು ನಿಂತು "ಧೀರಮತಿ, ನೀನು ಮಾಡಿದ ಆಕ್ಷೇಪಣೆ ಅರ್ಥರಹಿತವಾದುದು. ತಪ್ಪೆಲ್ಲಾ ನಿಮ್ಮ ತಾಯಿಯದಾಗಿರಲು ನಮ್ಮನ್ನೇಕೆ




ವೃಥಾ ನಿಂದಿಸುವೆ? ಮೂರು ವರ್ಷಗಳಿಂದ ನಿಮ್ಮ ತಾಯಿ ನಮ್ಮನ್ನು ಮೋಸಗೊಳಿಸುತ್ತಿದ್ದಾಳೆ. ಮದುವೆಯಾಗುವುದಾಗಿ ನಮ್ಮಲ್ಲಿ ಪ್ರತಿಯೊಬ್ಬರಿಗೂ ಯಾವುದೋ ಒಂದು ರೀತಿ ಆಶೆ ತೋರಿದಳು. ಮೂರು ವರ್ಷಗಳು ಕಳೆದು ನಾಲ್ಕನೇವರ್ಷ ಪ್ರಾರಂಭವಾಗಿದೆ. ಆದರೆ ಆ ಬಟ್ಟೆ ನೇಯುವುದು ಇನ್ನೂ ಮುಗಿದಿಲ್ಲ. ರಾತ್ರಿಹೊತ್ತು ದೀಪದಮುಂದೆ ಕುಳಿತು ಹಗಲು ಮಾಡಿದ ಕೆಲಸವನ್ನೆಲ್ಲಾ ಬಿಚ್ಚುತ್ತಿದ್ದರೆ ಪೂರ್ತಿಯಾಗುವುದಾದರೂ ಹೇಗೆ? ಆಕೆಯನ್ನು ವಿವಾಹವಾಗಬೇಕೆಂದಿರುವವರ ಪರವಾಗಿ ನಾನು ಈಗ ಹೇಳುತ್ತಿದ್ದೇನೆ ಕೇಳು. ಆಕೆಯನ್ನು ನಿನ್ನ ಮನೆಯಿಂದ ಹೊರಗೆ ಕಳುಹಿಸಿಬಿಡು. ತನ್ನಿಷ್ಟಬಂದಾತನನ್ನು ವಿವಾಹ



ಮಾಡಿಕೊಳ್ಳುವಂತೆ ಹೇಳು. ಆಕೆ ಹೀಗೇ ನಮ್ಮನ್ನು ಮೋಸಗೊಳಿಸಲೆತ್ನಿಸಿದರೆ ನಾವು ಸುಮ್ಮ ನಿರಲಾರೆವು. ಆಕೆ ನಮ್ಮಲ್ಲಿ ಯಾರಾದರೊಬ್ಬರನ್ನು ಮದುವೆ ಮಾಡಿಕೊಳ್ಳಲಿ. ನಾವು ಮರುಮಾತಿಲ್ಲದೆ ನಿನ್ನ ಮನೆಯಿಂದ ಹೊರಬೀಳುವೆವು," ಎಂದ.

"ಹೆತ್ತ ತಾಯಿಯನ್ನು ಓಡಿಸುವಷ್ಟು, ಧೂರ್ತನಾನಲ್ಲ; ಆಕೆ ತನ್ನ ತೌರುಮನೆಯಿಂದ ತಂದಿದ್ದ ಆಸ್ತಿಯನ್ನು ಹಿಂತಿರುಗಿಸುವ ಸ್ಥಿತಿಯಲ್ಲಿ ನಾನಿಲ್ಲ" ಎಂದ ಧೀರಮತಿ.

ಇನ್ನೊಬ್ಬ ವೃದ್ಧನು ಎದ್ದುನಿಂತು "ರೂಪಧರನು ಯುದ್ಧಕ್ಕೆ ಹೊರಟಾಗಲೇ ನಾನು ಭವಿಷ್ಯ ಹೇಳಿದ್ದೆ—ಆತನು ಇಪ್ಪತ್ತು ವರ್ಷ ಅನೇಕ ಕಷ್ಟನಷ್ಟಗಳಿಗೆ ಗುರಿಯಾಗಿ ಸ್ವದೇಶವನ್ನು ಸೇರುವನೆಂದು! ಇಂದಿನ ತನಕ ನಾನು ಹೇಳಿದ ಮಾತು ಯಾವುದೂ ಸುಳ್ಳಾಗಲಿಲ್ಲ. ಈಗ ಆತನ ಮನೆಯಲ್ಲಿ ಹಾವಳಿ ನಡೆಸುತ್ತಿರುವವರಿಗೆ ಬಹಳ ಕೆಟ್ಟದಿನಗಳು ಪ್ರಾಪ್ತವಾಗಲಿವೆ ತಿಳಿಯಿರಿ" ಎಂದನು.

"ಮುದುಕಪ್ಪಾ, ನಿನ್ನ ಭವಿಷ್ಯ ನಿನ್ನ ಮಕ್ಕಳಿಗೆ ಹೇಳು. ನಾವು ನಿನ್ನ ಬೆದರಿಕೆಗಳಿಗೆ ಹೆದರುವ ಹೇಡಿಗಳಲ್ಲ. ರೂಪಧರನು ಮತ್ತೆ ಬಂದರೂ ನಮ್ಮನ್ನು ಓಡಿಸುವ ಸಾಹಸ ಕಾರ್ಯ ಮಾಡಲಾರ" ಎಂದು ಇನ್ನೊಬ್ಬ ಜಂಬಕೊಚ್ಚಿದ.

ಧೀರಮತಿ ತಟಕ್ಕನೆದ್ದುನಿಂತು "ನಾನು ಹೇಳ ಬೇಕಾದುದನ್ನು ಹೇಳಿಬಿಟ್ಟೆ. ದಯವಿಟ್ಟು ನನಗೊಂದು ನಾಕೆ, ಇಪ್ಪತ್ತುಜನ





ನಾವಿಕರನ್ನು ಕೊಟ್ಟರೆ ಕೂಡಲೇ ಸ್ಪಾರ್ಟಾ ಮತ್ತು ಪೈಲಾಸ್‌ಗೆ ಹೋಗಿ ನನ್ನ ತಂದೆಯ ವೃತ್ತಾಂತವನ್ನು ತಿಳಿದುಕೊಂಡು ಬರುತ್ತೇನೆ. ಒಂದುವೇಳೆ ನನ್ನ ತಂದೆ ಜೀವಿಸಿರುವುದಾಗಿ ತಿಳಿದುಬಂದರೆ ಇನ್ನೊಂದು ವರ್ಷ ನಿಮ್ಮ ಹಾವಳಿಯನ್ನು ಸಹಿಸುವೆನು. ಹಾಗಲ್ಲದೆ ಅವರು ತೀರಿಕೊಂಡರೆಂದು ಖಚಿತವಾದರೆ ಅವರಿಗೆ ಉತ್ತರಕ್ರಿಯೆಗಳನ್ನು ನೆರವೇರಿಸಿ, ನಮ್ಮ ತಾಯಿಗೆ ಮದುವೆಯನ್ನು ನಾನೇ ಸ್ವತಃ ಮಾಡಿಸುವೆನು" ಎಂದ.

ಸಭೆಮುಗಿದನಂತರ ಧೀರಮತಿ ಮನೆಗೆ ಹೋಗದೆ ನೆಟ್ಟಗೆ ಸಮುದ್ರತೀರದ ಕಡೆ ಹೋದನು. ಅಲ್ಲಿ ಅವನಿಗೆ ಸಹನನೆಂಬಾತನು ಕಾಣಿಸಿದನು. ಸಹನನು ರೂಪಧರನ ಆಪ್ತ ಮಿತ್ರ. ಆತನು ಧೀರಮತಿಯ ಬೆನ್ನು ತಟ್ಟಿ "ಮಗೂ, ಇಂದು ನಿನ್ನನ್ನು ನೋಡಿ ನನಗೆ ತುಂಬಾ ಸಂತೋಷವಾಗಿದೆ. ಆ ತಂದೆಗೆ ತಕ್ಕ ಮಗನೆನಿಸಿಕೊಂಡೆ. ಇಥಾಕಾದಲ್ಲಿ ಅನೇಕ ನೌಕೆಗಳಿವೆ. ಅವುಗಳಲೆಲ್ಲಾ ಉತ್ತಮವಾದ ನೌಕೆಯನ್ನು ಆರಿಸಿ ನಿನ್ನ ಪ್ರಯಾಣಕ್ಕೆ ಸಿದ್ಧಪಡಿಸುವೆನು. ಪ್ರಯಾಣಕ್ಕೆ ಬೇಕಾದ ನೌಕರರನ್ನು ನಾನು ಆರಿಸಿ ಕೊಡುತ್ತೇನೆ. ನೀನು ಮನೆಗೆ ಹೋಗಿ ವಸ್ತು ಸಾಮಗ್ರಿಗಳನ್ನು ತೆಗೆದುಕೊಂಡು ಬಾ" ಎಂದನು. ಧೀರಮತಿ ಮನೆಗೆ ಹೊರಟನು.

ಮನೆಯಲ್ಲಿ ಕಾಲಿಟ್ಟಕೂಡಲೇ ಆಕ್ರಮಣಕಾರರು ಪರಿಹಾಸ್ಯ ಮಾಡಲಾರಂಭಿಸಿದರು. "ಎಲಾ, ಇವನು ನಮ್ಮೆಲ್ಲರ ರಕ್ತ ಕುಡಿಯ





ಬೇಕೆಂದು ಹವಣಿಸುತ್ತಿದ್ದಾನೆ. ಇಷ್ಟುದಿನಗಳು ಏನೋ ಅಂತಿದ್ದೆವು" ಎಂದು ಒಬ್ಬನೆಂದ.

"ಇವನು ಪೈಲಾಸ್ ಮತ್ತು ಸ್ಪಾರ್ಟಾಗೆ ಹೋಗುತ್ತಿರುವ ರಹಸ್ಯವಾದರೂ ಏನು ಗೊತ್ತೆ? ಭಾರಿ ಸೈನ್ಯದೊಂದಿಗೆ ಬಂದು ನಮ್ಮೆಲ್ಲರನ್ನೂ ನಿರ್ಮೂಲ ಮಾಡುತ್ತಾನೆ" ಎಂದ ಇನ್ನೊಬ್ಬ.

"ಹಾಗಲ್ಲ; ಯಾವುದೋ ಚೂರ್ಣ ತಂದು ಸಾರಾಯಿಯಲ್ಲಿ ಬೆರಸಿದರೂ ಬೆರಸಬಹುದು" ಎಂದ ಮತ್ತೊಬ್ಬ.

"ತಂದೆಯಂತೆ ಇವನೂ ಸಹ ಸಮುದ್ರದ ಪಾಲಾಗುತ್ತಾನೆ. ಇವನ ಆಸ್ತಿ ಹಂಚಿಕೊಳ್ಳಲಾರದೆ ನಾವು ಹೊಡೆದಾಡಿಕೊಂಡು ಸಾಯಬೇಕಾಗುತ್ತದೆ" ಎಂದ ಮಗದೊಬ್ಬ.

ಅಲ್ಲಿ ನೆರದಿದ್ದವರೆಲ್ಲ ಗಹಗಹಿಸಿ ನಕ್ಕರು. ಧೀರಮತಿ ಅವರ ಮಾತುಗಳಿಗೆ ಬೆಲೆಕೊಡಲಿಲ್ಲ. ನೇರವಾಗಿ ಉಗ್ರಾಣದತ್ತ ಹೋಗಿ ತನ್ನನ್ನು ಸಾಕಿದ ದಾದಿಯೊಂದಿಗೆ ತನ್ನ ಪ್ರಯಾಣದ ಸುದ್ದಿ ತಿಳಿಸಿ, ಪ್ರಯಾಣಕ್ಕೆ ಅಗತ್ಯವಾದ ಸಾಮಾನುಗಳನ್ನು ಸಿದ್ಧಪಡಿಸುವಂತೆ ಆ ಮುದುಕಿಗೆ ಹೇಳಿದನು.

"ನೀನು ಹೋಗಬೇಡ ಮಗು. ನೀನೂ ಹೊರಟುಬಿಟ್ಟರೆ ನಿಮ್ಮ ತಾಯಿಯ ಗತಿ ಏನಾಗಬೇಕು! ನಿನಗೇಕೆ ಇದ್ದಕ್ಕಿದ್ದಂತೆ ಈ ದುರ್ಬುದ್ಧಿ ಹುಟ್ಟಿತು" ಎಂದು ಮುದುಕಿ ಅಳಲಾರಂಭಿಸಿದಳು.

"ದೊಡ್ಡಮ್ಮಾ, ಇದೆಲ್ಲಾ ದೈವನಿರ್ಣಯ. ಇಂದು ರಾತ್ರಿ ಅಮ್ಮ ನಿದ್ರೆಹೋದನಂತರ ನಾನು ಹೊರಟುಬಿಡುತ್ತೇನೆ. ಆಕೆ ಕೇಳಿದ ಹೊರತು ನನ್ನ ಪ್ರಯಾಣದ ಸುದ್ದಿಯನ್ನು ಅವಳಿಗೆ ಹೇಳುವುದಿಲ್ಲವೆಂದು ಪ್ರಮಾಣ ಮಾಡು." ಎಂದ ಧೀರಮತಿ.

ಅವಳಿಂದ ಪ್ರಮಾಣಮಾಡಿಸಿಕೊಂಡು, ಧೀರಮತಿ ಸಿದ್ಧನಾದನು. ರಾತ್ರಿ ಎಲ್ಲರೂ ನಿದ್ರಾವಶರಾಗಿದ್ದಾಗ ಧೀರಮತಿ ಸಹನನೊಂದಿಗೆ ನೌಕೆಯನ್ನು ಸೇರಿದನು.

ಅನುಕೂಲವಾದ ಗಾಳಿ ಬೀಸಲಾರಂಭಿಸಿತು. ನಾವಿಕರು ತೆರೆಚಾಪೆಗಳನ್ನೆತ್ತಿ ನೌಕೆಯನ್ನು ನಡೆಸಿದರು. ನೌಕೆ ಮುಂದೆ ಸಾಗಿತು.

[ಇನ್ನೂ ಇದೆ]



## ವಿದ್ಯೆ

ವಿದ್ಯೆಯೇ ಮಾನವನ ರೂಪಸಂಪತ್ತು!
ವಿದ್ಯೆಯಿಲ್ಲದವಂಗೆ ತಪ್ಪದು ವಿಪತ್ತು!
ಭೋಗಭಾಗ್ಯಗಳೆಲ್ಲ
ವಿದ್ಯೆಯಾಧೀನ !
ತ್ಯಾಗದಿಂದಕ್ಷಯಿಸಿ
ಬಹುದು ಬಹುಮಾನ !
ಪರಲೋಕ ಗಮನದಲಿ
ವಿದ್ಯೆಯೇ ಬಂಧು !
ವರವಿದ್ಯೆ ಪಡೆದವನು
ಸುಜ್ಞಾನಸಿಂಧು !
ರಾಜ ಸನ್ಮಾನವನು
ವಿದ್ಯೆ ಪಡೆಯುವುದು !
ಈ ಜಗದೊಳದಕೆ ಸಮ
ವಿನ್ನೊಂದು ಸಿಗದು !
ವಿದ್ಯೆ ಯಿಲ್ಲದನರನು
ಪಶುಗಳಿಗೆ ಸಮನು !
ವಿದ್ವಾಂಸನಾದವನು
ದೇವನಿಗೆ ಸಮನು !

—ಅಮ್ಮೆಂಬಳ ಅನಂತಯ್ಯ, ನಾವಡ.

## ಕಂದ ಕೇಳೋ!

ಅಳಬೇಡ ಕಂದಾ
ನಲಿಯೊ ಬಾ ನಂದಾ
ವಿದ್ಯೆ ಕಲಿ ಚೆಂದಾ
ಬುದ್ಧಿ ಬಲದಿಂದಾ

ಗದ್ದುಗೆಯನೇರೋ
ಮುದ್ದು ಮೊಗ ತೋರೋ
ಜ್ಞಾನದಾಹದಲೀ
ಒಳ್ಳೆ ಗುಣಬರಲಿ

ಗುಣಧನದಿ ಬೆಳೆಯೋ
ಹಿರಿಯರನು ಪೊರೆಯೋ
ನಗುಬೀರಿ ಜಿಗಿಯೋ
ಸೊಗಸಾಗಿ ನೆಗೆಯೋ

ದುಗುಡವನು ಹೊಡೆಯೋ
ದೇವರಡಿ ಹಿಡಿಯೋ
ನೆನೆದವರ ಮರೆಯಾ
ಶರಗಪುರದೆರೆಯ

—ಟಿ. ಯಸ್. ಸರ್ವಜ್ಞರಾವ್.

## ಭಿಕ್ಷುಕ



ಶಾಂಭಟ್, ಕುಳೂರು

ಬಂದೆನು ಅಮ್ಮಾ ತಿರುಕನು ತಿಮ್ಮ । ಬಾಗಿಲ ತೆರೆಯಿರಿ ಕೊಡಿ ಭಿಕ್ಷೆ ॥
ಬಿಸಿಲಿನ ಬೇಗೆಗೆ ಬೆಂದೆನು ನೋಡಿ । ಬೀದಿಗಳನು ನಾ ತಿರು ತಿರುಗಿ ॥
ಬುತ್ತಿಯು ಇಲ್ಲಾ ಬಟ್ಟೆಯು ಇಲ್ಲ । ಬೂದಿಯ ಬಳಿಯುತ ಜೀವನವೂ ॥
ಬೆಳಗಿಂದಲೆ ನಾ ತಿರುಗುತ ಬಳಲಿ । ಬೇಸರ ಪಡುವೆನು ಹಸಿವೆಯಲೀ ॥
ಬೈಗಳನೆಷ್ಟೋ ತಿಂದೆನು ಅಮ್ಮಾ । ಬೊಗಸೆಗೆ ಅನ್ನವ ನೀಡಮ್ಮ ॥
ಬೋನವ ನಾ ನೋಡದೆ ಕಳೆಯಿತು ದಿನ । ಭೌತಿಕರೂಪವೆ ಕೆಟ್ಟಿಹುದೂ ॥
ಬಂದೆನು ನಾನೂ ಬೇಡುತ ಕೂಳೂ । ನಿಮ್ಮಯ ಮನೆಯು ಬೆಳಗುವುದು ॥



# ಕಡುಗಲಿ ಕರಿಯ

ಒಂದೂರಿನಲ್ಲಿ ಒಬ್ಬ ಕೂಲಿಯುವನಿದ್ದನು. ಅವನಿಗೆ ಮೂವರು ಮಕ್ಕಳು. ಹಿರಿಯ ಮಗ ಒಬ್ಬ ಸಾಹುಕಾರನ ಮನೆಯಲ್ಲಿ ಊಳಿಗಕ್ಕೆ ಸೇರಿದನು. "ಲೋ, ನೀನು ಕೋಳಿ ಕೂಗಿದ ಕೂಡಲೇ ಎದ್ದು ಕೆಲಸ ಪ್ರಾರಂಭಿಸಬೇಕು. ಇಲ್ಲವಾದರೆ ನಿನ್ನನ್ನು ಕೆಲಸದಲ್ಲಿರಿಸಿಕೊಳ್ಳಲಾರೆ" ಎಂದು ಸಾಹುಕಾರನು ಊಳಿಗದವನಿಗೆ ಖಂಡಿತ ಹೇಳಿದ್ದನು.

ಅವನು ಅದೇಪ್ರಕಾರ ಕೋಳಿಕೂಗುತ್ತಲೇ ಎದ್ದು ಕೆಲಸಕ್ಕೆ ಹೋಗುತ್ತಿದ್ದನು. ನಾಲ್ಕನೇಯದಿನ ಅವನು ಕೋಳಿಕೂಗಿದರೂ ಎದ್ದೇಳಲಿಲ್ಲ. ಕೂಡಲೇ ಸಾಹುಕಾರನು ಅವನನ್ನು ಕೆಲಸದಿಂದ ವಜಾಮಾಡಿದನು.

ತರುವಾಯ ಎರಡನೇಯವನು ಅಲ್ಲಿ ಕೆಲಸಕ್ಕೆ ಸೇರಿದನು. ಒಂದು ವಾರದಮೇಲೆ ಅವನಿಗೂ ಅದೇ ಗತಿಯಾಯಿತು.

ಕಡೆಗೆ ಕಿರಿಯವನಾದ ಕರಿಯ ಸಾಹುಕಾರನಬಳಿ ಚಾಕರಿಗೆ ಸೇರಿದನು. ತನ್ನ ಅಣ್ಣಂದಿರಿಬ್ಬರೂ ಸಾಹುಕಾರನಿಂದ ಮೋಸ ಹೋದ ಸಂಗತಿ ಅವನಿಗೆ ತಿಳಿದಿತ್ತು. ಸಾಹುಕಾರನು ಪದ್ಧತಿಯಂತೆ ತನ್ನ ಹೊಸ ಕೆಲಸದಾಳಿನೊಂದಿಗೆ "ಲೋ, ನೀನು ಪ್ರತಿ ದಿನಾ ಕೋಳಿಕೂಗುವ ವೇಳೆಗೆ ಕೆಲಸದ ಮೇಲೆ ಹೋಗಬೇಕು. ಹಾಗೆ ಮಾಡದಿದ್ದರೆ ನೀನೊಂದು ಕ್ಷಣವಾದರೂ ಇಲ್ಲಿರಲು ಸಾಧ್ಯವಿಲ್ಲ. ಮುಂಜಾನೆಯಿಂದ ಸಂಜೆಯು ತನಕ ಮೈಮುರಿದು ಕೆಲಸ ಮಾಡಬೇಕು" ಎಂದನು.

"ಆಗಬಹುದು ಸ್ವಾಮಿ" ಎಂದ ಕರಿಯ.

"ಹಾಗಾದರೆ ಏನು ಬೇಕು ಸಂಬಳ?" ಕೇಳಿದ ಸಾಹುಕಾರ.

"ನಾನೇನೂ ಆಷಾಢಭೂತಿಯಲ್ಲ ಸ್ವಾಮಿ. ಒಂದು ವರ್ಷ ಕೆಲಸ ಮಾಡಿದನಂತರ ನಿಮ್ಮನ್ನೊಂದುಬಾರಿ ಗುದ್ದಲು, ಯಜಮಾನಿಯನ್ನು ಒಮ್ಮೆ ಚಿವುಟಲು ಅವಕಾಶಕೊಡಿ, ಸಾಕು" ಎಂದ ಕರಿಯ.

ಇವನೊಬ್ಬ ಬೆಪ್ಪನೆಂದು ಭಾವಿಸಿ ಸಾಹುಕಾರನು ನಸುನಕ್ಕು, ಅವನ ಕೋರಿಕೆಗೆ ಒಪ್ಪಿಗೆಯಿತ್ತನು.

ಟಿ. ಕಮಲಾಕರ





ಅಂದೆಲ್ಲಾ ಕೆಲಸಮಾಡಿ, ಸಂಜೆಯಾದ ಕೂಡಲೇ ಮಲಗಿಕೊಳ್ಳಲು ಹೋಗುವಮುನ್ನ ಕರಿಯನು ಹುಂಜವನ್ನು ಹಿಡಿದು ಅದರ ತಲೆಯನ್ನು ಬಗ್ಗಿಸಿ, ರೆಕ್ಕೆಯ ಕೆಳಗೆ ಕಟ್ಟಿ ತನ್ನ ಪಾಡಿಗೆ ತಾನು ನಿದ್ರೆಹೋದನು.

ಬೆಳ್ಳಂಬೆಳಗಾದರೂ ಹುಂಜ ಕೂಗಲಿಲ್ಲ. ಕರಿಯನು ಹಾಸಿಗೆಯಿಂದೆದ್ದು ಯಜಮಾನನ ಬಳಿಗೆ ಹೋಗಿ "ಅದೆಂಥ ಹುಂಜ ಕಣ್ರೀ ರಾಯ್ರೇ, ಬೆಳಗಾದರೂ ಕೂಗಲೊಲ್ಲದೇಕೆ? ನನಗಿಷ್ಟು ತಂಗಳು ಹಾಕಿಸಿ, ನಾನು ಬೇಗ ಕೆಲಸಕ್ಕೆ ಹೋಗುತ್ತೇನೆ" ಎಂದ.

ಕೋಳಿ ಯಾಕೆ ಕೂಗಲಿಲ್ಲವೋ ಸಾಹುಕಾರನಿಗೆ ತಿಳಿಯದು. ಅವನು "ಲೋ, ನಾವಿಂದು ಪೇಟೆಗೆ ಹೋಗೋಣ ಬಾ" ಎಂದ. ಹೊಸ ಹುಂಜವೊಂದನ್ನು ಕೊಂಡು ತರಬೇಕೆಂದು ಅವನ ಉದ್ದೇಶ.

ಇಬ್ಬರೂ ಪೇಟೆಗೆ ಹೋಗುತ್ತಿರಲು ಅವರಿಗೊಂದು ಗೂಳಿ ಕಾಣಿಸಿತು. ಅದಕ್ಕೆ ಹಗ್ಗ ಬಿಗಿದು ನಾಲ್ಕು ಜನ ಎಳೆಯುತ್ತಿದ್ದರೂ ಅದು ಹತೋಟಿಗೆ ಬಂದಿರಲಿಲ್ಲ.

"ಎಲ್ಲಿಗೆ ಹೋಗುತ್ತಿದ್ದೀರಯ್ಯಾ" ಎಂದು ಕೇಳಿದ ಕರಿಯ. "ಈ ಗೂಳಿಯನ್ನು ಮಾರಲು ಹೊರಟಿದ್ದೇವೆ. ಯಾರೂ ತೆಗೆದುಕೊಳ್ಳದಿದ್ದರೆ ಕಟುಕನಿಗೆ ಒಪ್ಪಿಸುತ್ತೇವೆ" ಎಂದರು ಅವರು.

"ಭಲೆ ಗೂಳಿ ಕಣಯ್ಯಾ ಇದು. ಇರಲಿ, ನನ್ನದೊಂದು ಗುದ್ದು" ಎಂದು ಅದರ ತಲೆಯಮೇಲೆ ಮುಷ್ಟಿಯಿಂದ ಒಂದು ಗುದ್ದು ಗುದ್ದಿದ. ಕೂಡಲೇ ಆ ಗೂಳಿ ಕೆಳಗುರುಳಿ ಸತ್ತುಹೋಯಿತು.

ಅದನ್ನು ಎಳೆದುಕೊಂಡು ಹೋಗುತ್ತಿದ್ದ ಜನ "ಸದ್ಯ ಪೀಡೆ ಕಳೆಯಿತು. ಆದರೆ ಸ್ಥಳವಲ್ಲದ ಸ್ಥಳದಲ್ಲಿ ಸತ್ತುಬಿದ್ದಿದೆ. ಇದರ ಚರ್ಮವಾದರೂ ಸಿಕ್ಕಿದರೆ ಸೊಗುಸಿತ್ತು" ಎಂದರು.

"ಅದೆಂತಹ ಮಹಾಭಾಗ್ಯ" ಎಂದು ಕರಿಯ ಗೂಳಿಯ ಚರ್ಮವನ್ನು ತನ್ನ ಎರಡು ಬೆರಳುಗಳ ನಡುವೆ ಗಟ್ಟಿಯಾಗಿ ಹಿಡಿದೆಳೆದನು. ಕೂಡಲೇ ಚರ್ಮ ಬಾಳೆಹಣ್ಣಿನ ಸಿಪ್ಪೆಯಂತೆ ಕಳಚಿಕೊಂಡು ಬಂತು.

ತನ್ನ ನೌಕರನ ಹೊಡೆತ ಮತ್ತು ಚಿವುಟುಗಳ ಶಕ್ತಿ ಕಂಡು ಸಾಹುಕಾರನು ಥರಥರ





ನಡುಗಿದನು. ಅವನ ಮೈಯೆಲ್ಲಾ ಬೆಮರಿತು. "ಎಲೋ ಕರಿಯಾ, ಪೇಟೆಗೆ ಮತ್ತೆಂದಾದರೂ ಹೋಗೋಣ. ಈಗ ಮನೆಗೆ ನಡೆ" ಎಂದು ಸಾಹುಕಾರನು ಬೇರೆ ಹುಂಜ ಕೊಳ್ಳುವ ಪ್ರಯತ್ನವನ್ನು ನಿಲ್ಲಿಸಿ, ಮನೆಗೆ ಹಿಂತಿರುಗಿದನು.

ಅವನು ತನ್ನ ಹೆಂಡತಿಯೊಂದಿಗೆ "ಲೇ, ಕರಿಯನು ನಮ್ಮ ನೌಕರನಲ್ಲ, ನಮ್ಮ ಪಾಲಿನ ಯಮದೂತ. ಕೆಲಸಕ್ಕೆ ಸೇರಿಸಿಕೊಳ್ಳುವ ಮುನ್ನ ಸಂಬಳವೆಷ್ಟು ಬೇಕು ಅಂತ ಕೇಳಲು, ನನಗೊಂದು ಪೆಟ್ಟು ಕೊಟ್ಟು, ನಿನ್ನನ್ನೊಮ್ಮೆ ಚಿವುಟಲು ಅವಕಾಶಕೊಟ್ಟರೆ ಸಾಕೆಂದು ಹೇಳಿದ. ಒಪ್ಪಿಕೊಂಡೆ. ಆದರೆ ಇಂದು ನಡೆದುದಾದರೂ ಏನು ಗೊತ್ತೇ?" ಎಂದು ಕರಿಯನ ಒಂದೇ ಒಂದು ಗುದ್ದಿಗೆ ಗೂಳಿ ಸತ್ತುಹೋದುದನ್ನೂ, ಅವನು ಚರ್ಮವನ್ನು ಸುಲಿದುದನ್ನೂ ತಿಳಿಸಿದನು.

"ಅಯ್ಯಮ್ಮೋ. ಇಂಥವನನ್ನು ಒಂದು ಕ್ಷಣವಾದರೂ ಮನೆಯಲ್ಲಿರಿಸಿಕೊಳ್ಳಬಾರದು. ನಾನು ಹೇಳಿದಂತೆ ಮಾಡಿದರೆ ಇವನ ಸಹವಾಸ ತಪ್ಪುತ್ತದೆ. ಇಂದು ಹಸುಗಳನ್ನು ಮನೆಗೆ ಅಟ್ಟಿಕೊಂಡು ಬಂದಾಗ ಒಂದು ಹಸು ಬರಲಿಲ್ಲವೆಂಬ ನೆಪಹೂಡಿ ಅವನನ್ನು ಅಡವಿಗೆ ಅಟ್ಟು. ಅಲ್ಲಿ ಯಾವುದಾದರೊಂದು ದುಷ್ಟಮೃಗ ಅವನನ್ನು ಬಾಯಿಗೆ ಹಾಕಿಕೊಳ್ಳುತ್ತದೆ. ಇಲ್ಲದಿದ್ದರೆ ನಾವು ಇವನಿಂದ ಬಾಳುವಂತಿಲ್ಲ" ಎಂದಳು ಸಾಹುಕಾರನ ಸತಿ. ಕಾರ್ಯದಲ್ಲಿ ಗಂಡನಿಗಿಂತಲೂ ಅವಳೇನೂ



ಕಡಿಮೆಯಲ್ಲವಷ್ಟೆ! ಸಾಹುಕಾರನಿಗೆ ಹೆಂಡತಿಯು ಈ ಸಲಹೆ ಸರಿಯೆನ್ನಿಸಿತು.

ಸೂರ್ಯಾಸ್ತಮಯದ ವೇಳೆಗೆ ಕರಿಯು ಹಸುಗಳನ್ನು ಮನೆಗೆ ಅಟ್ಟಿಕೊಂಡು ಬಂದ. ಆಗ ಸಾಹುಕಾರನು "ಹಸುಗಳೆಲ್ಲಾ ಬಂದಿವೆಯೇನೋ ಕರಿಯಾ? ಅರೆ, ಒಂದು ಹಸು ಕಾಣಿಸುತಿಲ್ಲವಲ್ಲೋ! ಮನೆಗೆ ಹಿಂತಿರುಗುವಾಗ ಹಸುಗಳನ್ನು ಒಮ್ಮೆ ಎಣಿಸಬಾರದೆ?" ಎಂದು ಕೂಗಾಡಿದ.

"ಬರುವಮುನ್ನ ಲೆಕ್ಕಮಾಡಿದೆ. ಎಲ್ಲಾ ಸರಿಯಾಗಿವೆ, ಸ್ವಾಮಿ" ಎಂದ ಕರಿಯ.

"ನಿನ್ನ ತಲೆ. ಒಂದು ಹಸು ಅಡವಿಯಲ್ಲೇ ಉಳಿದುಬಿಟ್ಟಿದೆ. ಓಡಿಹೋಗಿ ಅದನ್ನು ಪತ್ತೆಮಾಡಿಕೊಂಡು ಬಾ" ಎಂದ ಸಾಹುಕಾರ.

ಎಣಿಸುವಾಗ ತಾನೇ ತಪ್ಪುಮಾಡಿರಬಹುದೆಂದುಕೊಂಡು ಕರಿಯು ಕತ್ತಲೆಯಲ್ಲಿ ಕಾನನಕ್ಕೆ ಓಡಿ, ಅಲ್ಲೆಲ್ಲಾ ಸುತ್ತಾಡಿದ. ಒಂದು ಗುಹೆಯ ಹೊರಗೆ ಒಂದು ಕಪ್ಪನೆಯ ಆಕಾರ ಕಾಣಿಸಿತು. "ಶನಿಮುಂಡೇದು, ನೀನಿಲ್ಲಿದ್ದೀಯಾ? ನಡಿ ಮನೆಗೆ" ಎಂದು ಆ ಆಕಾರದ ಕುತ್ತಿಗೆ ಹಿಡಿದು ಧರಧರನೆ ಎಳೆದುಕೊಂಡು ಬಂದು ದನದ ಕೊಟ್ಟಿಗೆಯಲ್ಲಿ ಕೂಡಿದ ಕರಿಯು. ಅವನು ಅಡವಿಯಿಂದ ಎಳೆತಂದುದು ಒಂದು ಕರಡಿ. ಅವನು ಆ ವಿಷಯವನ್ನು ಗಮನಿಸಲೇ ಇಲ್ಲ.

ಮಾರನೇಯ ದಿನ ಬೆಳಗ್ಗೆ ಸಾಹುಕಾರನು ದನದ ಕೊಟ್ಟಿಗೆಯ ಬಾಗಿಲು ತೆರೆದು ಒಳಕ್ಕೆ ಹೋಗಿ ನೋಡಲು ಹಸುಗಳೆಲ್ಲಾ ಸತ್ತು







ಹೋಗಿದ್ದುವು. ಒಂದು ಮೂಲೆಯಲ್ಲಿ ಕರಡಿ ನಿಶ್ಚಿಂತೆಯಾಗಿ ಗೊರಕೆಹೊಡೆಯುತಿತ್ತು!

ಸಾಹುಕಾರನು ಎದೆಯೆದೆ ಬಡಿದು ಕೊಳ್ಳುತ್ತಾ ಕರಿಯನಬಳಿಗೆ ಬಂದು "ನೋಡಿದೆಯೇನೋ, ಕರಿಯ. ಎಲ್ಲಿಂದಲೋ ಕರಡಿಯೊಂದು ದನದಕೊಟ್ಟಿಗೆಗೆ ನುಗ್ಗಿ ಹಸು ಗಳನ್ನೆಲ್ಲಾ ಕೊಂದುಬಿಟ್ಟಿದೆ" ಎಂದ.

ಕರಿಯನು ಕೊಟ್ಟಿಗೆಗೆ ಬಂದು "ನಿಜವೇ! ಒಂದುವೇಳೆ ನಾನು ರಾತ್ರಿ ಎಳೆದುಕೊಂಡು ಬಂದದ್ದು ಈ ಕರಡಿಯೇ ಇರಬಹುದು. ಕತ್ತಲೆಯಲ್ಲಿ ತಿಳಿಯಲಿಲ್ಲ" ಎಂದ.

ಭಯಕಂಪಿತನಾದ ಸಾಹುಕಾರನು ಹೆಂಡತಿಯಬಳಿಗೆ ಹೋಗಿ ನಡೆದುದನ್ನೆಲ್ಲಾ ತಿಳಿಸಿದ. ಅವಳು "ಇವನನ್ನು ಪಿಶಾಚಿ ನುಂಗಬಾರದೆ. ಎಲ್ಲಿಂದ ವಕ್ರಿಸಿತಪ್ಪಾ ಈ ಶನಿ" ಎಂದು ಶಪಿಸಲಾರಂಭಿಸಿದಳು. "ಪಿಶಾಚಿಯೆಂದರೆ ಜ್ಞಾಪಕಬಂತು. ಇವನಿಂದ ತಪ್ಪಿಸಿಕೊಳ್ಳಲು ಇವನನ್ನು ಪಿಶಾಚಿಗಳಿಗೇ ಒಪ್ಪಿಸಬೇಕು" ಎಂದುಕೊಂಡು ಸಾಹುಕಾರನು ಕರಿಯನಬಳಿಗೆ ಬಂದು "ಲೋ, ಉತ್ತರ ದಿಕ್ಕಿನಲ್ಲಿ ನಮ್ಮ ಹೊಲದಾಚೆ ಪಿಶಾಚಿ ಬಾವಿಯಿದೆ ಗೊತ್ತೇ? ಅದರಲ್ಲಿ ವಾಸಿಸುವ ಪಿಶಾಚಿಗಳು ನಮಗೆ ಅನೇಕ ತಿಂಗಳ ಬಾಡಿಗೆ ಕೊಡಬೇಕಾಗಿದೆ. ತಕ್ಷಣ ಹೋಗಿ ವಸೂಲು ಮಾಡಿಕೊಂಡು ಬಾ" ಎಂದ.

"ಅವು ನಮಗೆಷ್ಟು ಬಾಕಿ ಕೊಡಬೇಕು?" ಎಂದು ಕರಿಯ ಕೇಳಿದ.

"ಕೊಟ್ಟಷ್ಟು ತೆಗೆದುಕೊಂಡು ಬಾರಯ್ಯಾ. ಅವುಗಳಕೂಡ ನಮಗೆ ಚೌಕಾಸಿ ಏತರದು?" ಎಂದ ಸಾಹುಕಾರ.

ಕೂಡಲೇ ಕರಿಯ ಒಂದು ಹೊರೆ ನಾರು ತೆಗೆದುಕೊಂಡು ಪಿಶಾಚಿಗಳ ಬಾವಿಯಬಳಿಗೆ ಹೋಗಿ ದಂಡೆಯಮೇಲೆ ಕುಳಿತು ಹಗ್ಗ ಹೊಸೆಯುತ್ತಿದ್ದನು. ಕೊಂಚ ಸಮಯದನಂತರ ಒಂದು ಪಿಶಾಚಿ ಬಾವಿಯಿಂದ ತಲೆಯೆತ್ತಿ ಕರಿಯನನ್ನು ಕಂಡು "ಇಲ್ಲೇನು ಮಾಡುತ್ತಿರುವೆಯಪ್ಪಾ" ಎಂದು ಕೇಳಿತು.

"ಕಾಣಿಸೋಲ್ಲವೇ? ಹಗ್ಗ ಹೊಸೆಯುತ್ತಿದ್ದೇನೆ" ಎಂದ ಕರಿಯ ತೀವ್ರ ಸ್ವರದಲ್ಲಿ. "ಯಾಕೆ?" ಕೇಳಿತು ಪಿಶಾಚಿ. "ಹೇಳಬೇಕೆ? ಓಹೋ ಸರಿ! ನಿಮ್ಮ ಪಿಶಾಚಿ ಗುಂಪ

ನೆಲ್ಲಾ ಹಿಡಿದು ಬಿಗಿದುಕಟ್ಟಲು" ಎಂದು ಒಳ್ಳೇ ಗಂಭೀರವಾಗಿ ನುಡಿದ ಕರಿಯ.

"ನಾವೇನು ತಪ್ಪು ಮಾಡಿದೆವು?" ಕೇಳಿತು ಪಿಶಾಚಿ ಆಶ್ಚರಿಯಿಂದ.

"ಪಾಪ, ಏನು ಮಾಡಿಲ್ಲ! ಅಲ್ಲ, ನೀವು ನಮ್ಮ ಯಜಮಾನರಿಗೆ ಸರಿಯಾಗಿ ಬಾಡಿಗೆ ಕೊಡುತ್ತಿಲ್ಲವಂತೆ?" ಎಂದ ಕರಿಯ.

"ಕೊಂಚ ತಾಳು, ನಮ್ಮ ಅರಸರೊಂದಿಗೆ ಈ ವಿಷಯ ತಿಳಿಸಿ ಬರುತ್ತೇನೆ" ಎಂದು ಪಿಶಾಚಿ ನೀರಿನಲ್ಲಿ ಬುಳಕ್ಕನೆ ಮುಳುಗಿತು.

ಕರಿಯ ತಾನು ಹೊಸೆಯುತ್ತಿದ್ದ ಹಗ್ಗದ ಎರಡು ಕೊನೆಗಳನ್ನು ಸೇರಿಸಿ ಹೊಸೆದು ದಡದ ಮೇಲಿಟ್ಟನು. ನಂತರ ಒಂದು ಆಳವಾದ ಹಳ್ಳ ತೋಡಿ, ಅದರಮೇಲೆ ಕೊಂಬೆಗಳನ್ನು ಹರಡಿದನು. ತನ್ನ ದೊಡ್ಡ ಮುಂಡಾಸಿಗೆ ತೂತು ಮಾಡಿಕೊಂಡು ಅದರಮೇಲೆ ಬೋರಲಿಟ್ಟನು.

ಇದು ಮುಗಿಯುವವೇಳೆಗೆ ಪಿಶಾಚಿ ನೀರಿನಿಂದ ತಲೆ ಎತ್ತಿ ನೋಡಿ "ಅಯ್ಯಾ, ನಾವೆಲ್ಲ ಪಾತಾಳದಲ್ಲಿದ್ದೇವೆ. ನಮ್ಮನ್ನು ಹೇಗೆ ಹಗ್ಗದಿಂದ ಬಂಧಿಸುವೆ? ನಮ್ಮ ಅರಸರು ಕೇಳು ಎಂತ ಹೇಳಿದರು" ಎಂದಿತು.

"ಅದೊಂದು ಪ್ರಮಾದವಾದ ಕಾರ್ಯವೆಂದು ಭಾವಿಸಿದೆಯಾ? ನನ್ನಬಳಿ ಕೊನೆ ಮೊದಲಿಲ್ಲದ ಹಗ್ಗವಿದೆ" ಎಂದು ಕರಿಯನು ಹಗ್ಗವನ್ನು ತನ್ನ ಕೈಗಳ ಮಧ್ಯೆಬಿಟ್ಟು ಸೇದಲಾರಂಭಿಸಿದನು. ಎಷ್ಟು ಹೊತ್ತು ಸೇದುತ್ತಿದ್ದರೂ ಹಗ್ಗಬರುತ್ತಲೇ ಇತ್ತು. ಪಿಶಾಚಿ ಕಂಗಾಲಾಗಿ "ನಾವೆಷ್ಟು ಬಾಕಿಕೊಡ



ಬೇಕು?" ಎಂದು ಕೇಳಿತು. ಕೂಡಲೇ ಕರಿಯನು ತನ್ನ ಮುಂಡಾಸನ್ನು ತೋರಿಸಿ "ಇದರ ತುಂಬಾ ಬೆಳ್ಳಿನಾಣ್ಯಗಳನ್ನು ಸುರಿದರೆ ಸಾಕು. ನೀವು ಕೊಡಬೇಕಾದ ಬಾಕಿಯೆಲ್ಲಾ ತೀರುತ್ತದೆ" ಎಂದ.

ಪಿಶಾಚಿ ಬೆಳ್ಳಿನಾಣ್ಯಗಳನ್ನು ತಂದು ಮುಂಡಾಸಿನಲ್ಲಿ ಸುರಿಯಲಾರಂಭಿಸಿತು. ಎಷ್ಟು ಸುರಿದರೂ ಮುಂಡಾಸು ತುಂಬುವಂತೆ ಕಾಣಿಸಲಿಲ್ಲ. ನಾಣ್ಯಗಳೆಲ್ಲ ಮುಂಡಾಸಿನ ತೂರಿನಿಂದ ಅಡಿಯಲ್ಲಿದ್ದ ಹಳ್ಳಕ್ಕೆ ಬೀಳುತಿತ್ತು! ಒಂದು ಗಾಡಿಯಷ್ಟು ನಾಣ್ಯತಂದು ಸುರಿದನಂತರ ಆ ಮುಂಡಾಸು ತುಂಬಿತು.

"ಇಷ್ಟಾರೆ ಚಿಕ್ಕ ಮುಂಡಾಸಿನಲ್ಲಿ ಎಷ್ಟು ನಾಣ್ಯ ಹಿಡಿಸಿತಪ್ಪಾ!" ಎಂದು ವಿಸ್ಮಯಗೊಂಡು ಪಿಶಾಚಿ ಹೊರಟುಹೋಯಿತು.

ಪಿಶಾಚಿ ಹೋದನಂತರ ಕರಿಯ ಹಣವನ್ನೆಲ್ಲಾ ಒಂದು ಗಾಡಿಯಲ್ಲಿ ಹೇರಿ, ಸಾಹುಕಾರನ ಮನೆಗೆ ಬಂದನು. ಅವನನ್ನೂ, ಅವನು ತಂದ ಬೆಳ್ಳಿನಾಣ್ಯಗಳನ್ನೂ ಕಂಡು ಸಂತೋಷಪಡುವಬದುಲು ಸಾಹುಕಾರನು ಭಯಭೀತನಾದನು. ಅವನು ತನ್ನ ಹೆಂಡತಿಯ ಬಳಿಗೆ ಓಡಿ "ಇವನ ಮನೆ ಹಾಳಾಗ. ಪಿಶಾಚಿಗಳೂ ಸಹ ಅವನನ್ನೇನೂ ಮಾಡಲಿಲ್ಲ. ಇವನ ಕೈಯಿಂದ ನಮಗೆ ಸಾವು ಮೂಡುವುದು ಖಂಡಿತ" ಎಂದು ಶೋಕಿಸಲಾರಂಭಿಸಿದನು.

"ಹುಸ್, ಗಟ್ಟಿಯಾಗಿ ಅರಚಬೇಡಿ. ಇವನನ್ನು ಓಡಿಸಲಂತು ನಮ್ಮಿಂದ ಸಾಧ್ಯವಿಲ್ಲ. ಆದುದರಿಂದ ಅರ್ಧರಾತ್ರಿಯಲ್ಲಿ ಯಾರಿಗೂ ತಿಳಿಯದಂತೆ ನಾವೇ ರಹಸ್ಯವಾಗಿ ಓಡಿಹೋಗೋಣ. ಆಸ್ತಿಹೋದರೆ ಹೋಯಿತು. ಜೀವಿಸಿದ್ದರೆ ಸೊಪ್ಪೋ ಸದೆಯೋ ತಿಂದು ಕಾಲಕಳೆಯಬಹುದು" ಎಂದಳು ಸಾಹುಕಾರನು ಸತಿ.

ಅಂದು ರಾತ್ರಿ ಆ ದಂಪತಿಗಳು ಎಲ್ಲಿಗೋ ಪರಾರಿಯಾದರು. ಮತ್ತೆಂದೂ ತಿರುಗಿಬರಲಿಲ್ಲ. ಅವರ ಆಸ್ತಿಯೆಲ್ಲಾ ಕರಿಯನಪಾಲಿಗೆ ಬಂದಿತು. ಅವನು ತನ್ನ ತಂದೆ ಮತ್ತು ತಾಯಿಯನ್ನು ತನ್ನಬಳಿಗೆ ಕರೆಯಿಸಿಕೊಂಡು ಪಿಶಾಚಿಗಳಿಂದ ಪಡೆದ ಹಣದಿಂದ ಸುಖವಾಗಿ ಜೀವಿಸುತ್ತಿದ್ದನು.



# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. 10

1958 ಆಗಸ್ಟು ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಜೂನ್ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.**

---

## ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಸೌಂದರ್ಯಸ್ಪರ್ಧೆಗೆ ಇವರಿಬ್ಬರಾದರೆ,

ಎರಡನೇ ಫೋಟೋ: ಶಿಲ್ಪಸ್ಪರ್ಧೆಗೆ ಇದೊಂದೇ ಸಾಕು !

ಕಳಿಸಿದವರು: ಎಸ್. ರಾಮಕೃಷ್ಣಹೆಬ್ಬಾರ,

ಶ್ರೀ ರಾಮಕೃಷ್ಣನಿವಾಸ, ಸುರಟ್ಕಲ್, (ದ. ಕ.)

**ಬಹುಮಾನ ರೂ. 10/-ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**



# ಮೊಯ್ಯಿಗೆ ಮೊಯ್ಯಿ

ಕೈರೋ ನಗರದಲ್ಲಿ ಗೋಹಾ ಎಂಬ ಪ್ರಸಿದ್ಧ ಹಾಸ್ಯಗಾರನಿದ್ದನು. ಆತನಿಗೆ ಒಂದು ಸಲ ತೋಟಗಾರಿಕೆಯಲ್ಲಿ ಆಸಕ್ತಿಯುಂಟಾಯಿತು. ಆತನು ತನ್ನ ಮನೆಯ ಹಿತ್ತಲಲ್ಲಿ ವಿವಿಧ ಪುಷ್ಪಗಳ ಅಂಟುಗಳನ್ನು ನಾಟಿ, ಪಾತಿಮಾಡಿ, ಅತ್ಯಂತ ಶ್ರದ್ಧೆಯಿಂದ ಬೆಳೆಸುತ್ತಿದ್ದನು.

ತೋಟಗಾರಿಕೆಯಲ್ಲಿ ಗೋಹಾಗೆ ಉಂಟಾದ ಆಸಕ್ತಿ ಕಂಡು ಮಿತ್ರರನೇಕರು ಆತನಿಗೆ ಆಗಿಂದಾಗ ಸಲಹೆ ಕೊಡುತ್ತಿದ್ದರು. ಕೆಲವುದಿನಗಳಲ್ಲೇ ಗೋಹಾ ಅಂದವಾದ ಪುಷ್ಪಗಳನ್ನು ಬೆಳೆಯಲಾರಂಭಿಸಿದನು.

ಒಂದುದಿನ ಸಂಪನ್ನನೊಬ್ಬನು ಗೋಹಾನನ್ನು ನೋಡಲು ಆತನ ಮನೆಗೆ ಬಂದನು. ಆಗ ಗೋಹಾ ತೋಟದಲ್ಲಿ ಕಳೆಕೀಳುತ್ತಿದ್ದನು.

"ಈ ನಡುವೆ ನಿನ್ನನ್ನು ಎಲ್ಲರೂ ಪ್ರಸಿದ್ಧ ತೋಟಮಾಲಿ ಎಂದು ಹೇಳುತ್ತಿದ್ದಾರೆ. ಆದರೆ ನಿನ್ನ ತೋಟದಲ್ಲಿ ಹೊಸಬಗೆಯ ಪುಷ್ಪಗಳೇನೂ ಕಾಣಿಸುತ್ತಿಲ್ಲವಲ್ಲಾ" ಎಂದ ಆ ಸಂಪನ್ನ ಗೃಹಸ್ಥ. "ನನಗೆ ಸಿಕ್ಕಿದ ಬೀಜಗಳನ್ನೆಲ್ಲಾ ಹಾಕಿರುತ್ತೇನೆ. ಇನ್ನೂ ಇಲ್ಲಿ ಹೊಸಬಗೆಯ ಪುಷ್ಪಗಳಿಲ್ಲದಿರುವುದು ನನ್ನ ತಪ್ಪಲ್ಲ" ಎಂದ ಗೋಹಾ.

"ತೀರಾ ಹೊಸತರಹದ ಬೀಜಗಳು ನನ್ನ ಬಳಿಯಿವೆ. ಆದರೆ ಅದನ್ನು ಬೆಳೆಸುವುದು ನಿನ್ನಿಂದ ಸಾಧ್ಯವಾಗದೇನೋ ಎಂತ ನನಗೆ ಅನುಮಾನ" ಎಂದ ಗೃಹಸ್ಥ. ಕಳುಹಿಸಿಕೊಡಿ ನಾನು ಯಾವ ಬೀಜವನ್ನಾದರೂ ಬೆಳೆಸುತ್ತೇನೆ" ಎಂದ ಗೋಹಾ.

"ನಾಳೆಮುಂಜಾನೆ ಆಳಿನ ಸಂಗಡ ಬೀಜಗಳನ್ನು ಕಳುಹಿಸುತ್ತೇನೆ. ಅದನ್ನು ನಮ್ಮ ಅಳಿಯಂದಿರು ಬಾಗದಾದಿನಿಂದ ಕಳುಹಿಸಿದ್ದಾರೆ" ಎಂದ ಗೃಹಸ್ಥ.

ಮಾರನೇಯದಿನ ಹೊತ್ತಾರೆ ಗೃಹಸ್ಥನ ಮನೆಯ ಆಳು ಗೋಹಾಗೆ ಒಂದು ಪೊಟ್ಟಣ ತಂದುಕೊಟ್ಟು "ಇದನ್ನು ಬಹಳ ಜೋಪಾನವಾಗಿ ಬೆಳೆಸ ಬೇಕಂತೆ ಹೀಗೆ ನಮ್ಮ ಯಜಮಾನರು ಹೇಳಿ ಕಳಿಸಿದ್ದಾರೆ." ಎಂದು ಹೇಳಿದನು. ಗೋಹಾ ಆ ಪೊಟ್ಟಣ ಬಿಚ್ಚಿ ನೋಡಿ

ಕೆ. ಕೆ. ರಾವ್

" ಇದು ಯಾವ ಬಗೆಯ ಬೀಜವೋ ನಿಮ್ಮ ಯಜಮಾನರು ಹೇಳಿದರೇ?" ಎಂದು ಕೇಳಿದ.

" ಅವರಿಗೆ ಅದರ ವಿಷಯ ತಿಳಿಯದಂತೆ. ಮೊಳಕೆಬಂದನಂತರ ಬಂದು ನೋಡುವುದಾಗಿ ತಮಗೆ ತಿಳಿಸೆಂದರು " ಎಂದು ಹೇಳಿ ಆಳು ಹೊರಟುಹೋದನು.

ಕುಶಲಿತೋಟಗಾರರು ಸಾಧಾರಣವಾಗಿ ತಾವು ಕಂಡರಿಯದ ಬೀಜಗಳು ಕಾಣಿಸಿದಾಗ ಒಂದನ್ನು ಬಾಯಿಗೆ ಹಾಕಿಕೊಂಡು ಮುಂದಿನ ಹಲ್ಲುಗಳಿಂದ ಕಚ್ಚಿ ರುಚಿನೋಡುವುದುಂಟು. ಗೋಹಾ ಹಾಗೇ ನೋಡಿದ. ಅವು ಒಣಗಿದ ಮಿಾನಿನ ಕಣ್ಣುಗುಡ್ಡೆಗಳು. ತನ್ನನ್ನು ಎಗತಾಳಿ ಮಾಡಲು ಆ ಗೃಹಸ್ಥನು ಅವುಗಳನ್ನು ಬಿತ್ತುವಂತೆ ಕಳುಹಿಸಿದ್ದಾನೆ! ಇವನಿಗೊಂದು ಪಾಠ ಕಲಿಸಬೇಕು ಎಂದು ಗೋಹಾ ನಿರ್ಧರಿಸಿಕೊಂಡನು.

ಎರಡು ವಾರ ಕಳೆಯಿತು. ಒಂದು ದಿನ ಗೋಹಾ ಪೇಟೆಗೆ ಹೋಗುತ್ತಿರಲು ದಾರಿಯಲ್ಲಿ ಆ ಸಂಪನ್ನ ಗೃಹಸ್ಥನು ನೋಡಿ " ಓಹೋ, ಏನು ಗೋಹಾ, ಗುಲಾಬಿ ಸೊಂಪಾಗಿ ಬೆಳೆದಿದೆಯೆ?" ಎಂದು ಕೇಳಿದನು.

" ನಿಮ್ಮ ದಯೆಯಿಂದ ಈ ವರ್ಷ ಎಲೆಗಳೂ ಸಹ ಕಾಣಿಸದಷ್ಟು ಗುಲಾಬಿ ಬೆಳೆದಿದೆ " ಎಂದ ಗೋಹಾ.

" ಅಂದಹಾಗೆ ನಾನು ಕಳುಹಿಸಿದ ಬೀಜಗಳನ್ನು ಬಿತ್ತಿದೆಯಾ?" ಗೃಹಸ್ಥ ಕೇಳಿದ. " ಅಂದೇ ಹಾಕಿದೆ " ಎಂದ ಹಾಸ್ಯಗಾರ.



ಗೃಹಸ್ಥನು ಉಕ್ಕಿಬರುತ್ತಿದ್ದ ನಗುವನ್ನು ತಡೆದುಕೊಂಡು " ಬಹುಶಃ ಮೊಳಕೆ ಬಂದಿರಲಾರದು. ಸಾಮಾನ್ಯ ತೋಟಗಾರರಿಂದ ಬೆಳೆಸಲು ಸಾಧ್ಯವಿಲ್ಲವೆಂದು ನಮ್ಮ ಅಳಿಯಂದಿರು ಹೇಳಿದ್ದರು " ಎಂದ.

" ಆ ಬೇಳೆಯಲ್ಲಾ ನಮ್ಮ ಬಳಿ ಬೇಯುವುದಿಲ್ಲ ಸ್ವಾಮಿ. ಸರಿಯಾಗಿ ಪಾತಿಗಳನ್ನು ಮಾಡಿ, ಸಾಕಷ್ಟು ಗೊಬ್ಬರಹಾಕಿ, ಬೀಜ ಬಿತ್ತಿ, ಮೊಳಕೆಗಳನ್ನು ಜೋಪಾನವಾಗಿ ನೋಡಿಕೊಂಡರೆ ಯಾವುದೇ ಬೀಜವಾದರೂ ಬೆಳೆಯುತ್ತದೆ. ನೀವು ಕಳುಹಿಸಿದ ಬೀಜದ ಮೊಳಕೆಗಳು ಆಗಲೇ ಮೂಡಿವೆ. ಅವುಗಳಿಗೆ ದೃಷ್ಟಿ ದೋಷ, ಬಿಸಿಲು ಬೀಳದಂತೆ ನೋಡಿಕೊಳ್ಳಬೇಕು. ಆದರಿಂದಲೇ ಮಡಕೆ

ಮುಚ್ಚಿಟ್ಟಿದ್ದೇನೆ. ನಾಳೆ ಬೆಳಗ್ಗೆ ನಮ್ಮ ಮನೆ ಕಡೆ ಬನ್ನಿ" ಎಂದ ಗೋಹಾ.

ಗೃಹಸ್ಥನು ಬೆರಗಾದನು. "ಬರ್ತೀನೆ, ತಪ್ಪದೆ ಬರ್ತೀನೆ" ಎಂದು ಹೇಳಿ ತೆಪ್ಪಗೆ ತನ್ನ ದಾರಿ ಹಿಡಿದ.

ಗೋಹಾ ಕೂಡಲೇ ಮೀನುಮಾರುವ ಬಜಾರಿಗೆ ಹೋಗಿ ಪುಟ್ಟಪುಟ್ಟ ಮೀನುಗಳನ್ನು ಕೊಂಡುಕೊಂಡು ಮನೆಗೆ ಹೋದನು. ತನ್ನ ಕಿರಿಯ ಮಗನನ್ನು ಕರೆದು "ಮಗೂ, ತಲೆ ಮಾತ್ರ ಕಾಣುವಂತೆ ಈ ಮೀನುಗಳನ್ನು ಸಾಲಾಗಿ ನಮ್ಮ ಹಿತ್ತಲಲ್ಲಿ ನೆಟ್ಟು, ಅವುಗಳ ಮೇಲೆ ಮಡಕೆಗಳನ್ನು ಮುಚ್ಚಿಡು" ಎಂದ.

ಮಾರನೇಯದಿನ ಮುಂಜಾನೆ ಗೃಹಸ್ಥನು ಗೋಹಾನ ಮನೆಗೆ ಬಂದನು. ಗೋಹಾ ಆತನನ್ನು ಸಂಗಡ ಕರೆದುಕೊಂಡು ಹೋಗಿ ಗಡಿಗೆಗಳನ್ನು ತೋರಿಸಿ "ಕೆಳಗೆ ಮೊಳಕೆಗಳಿವೆ" ಎಂದು ಒಂದು ಮಡಕೆಯನ್ನು ಎತ್ತಿ ತೋರಿಸಿದನು. ನೆಲದಿಂದ ಮೊಳಕೆ ಮೂಡುತ್ತಿರುವಂತೆ ಮೀನೊಂದು ಸಂಪನ್ನನ ಕಣ್ಣಿಗೆ ಬಿದ್ದಿತು. ಅವನ ಕಣ್ಣರಳಿತು.

ಗೋಹಾ ಮಡಕೆಗಳನ್ನೆಲ್ಲಾ ಎತ್ತಿ ತೋರಿಸಲು ಸಂಪನ್ನನು ಬೆರಗಾದನು. "ಆಶ್ಚರ್ಯ! ಅದ್ಭುತ!" ಎಂದ.

"ಇದನ್ನು ಬೆಳೆಸುವುದು ಬಹಳ ಕಷ್ಟವೇನಿಲ್ಲ. ನನಗೆ ಒಂದು ಹತ್ತು ಎಕರೆ ಜಮೀನಿದ್ದರೆ ಈ ಸಲ ಇದನ್ನೇ ಬೆಳೆಸಿಬಿಡುತ್ತಿದ್ದೆ" ಎಂದ ಗೋಹಾ.

"ಆ ಕೆಲಸ ನಾನು ಮಾಡುತ್ತೇನೆ" ಎಂದು ಸಂಪನ್ನನು ಮನೆಗೆ ಹೋಗಿ ತನ್ನ ರೈತರನ್ನು ಕರೆದು "ಲೋ, ಈ ವರ್ಷ ಹೊಲದಲ್ಲಿ ನೀವು ಒಣಗಿದ ಮೀನಿನ ಕಣ್ಣು ಗುಡ್ಡೆಗಳನ್ನು ಹಾಕಿ" ಎಂದು ಅಪ್ಪಣೆ ಮಾಡಿದ. ಹೀಗೆ ಆತನು ಹೇಳಿದುದರಲ್ಲಿ ಏನೋ ರಹಸ್ಯವಿರಬೇಕೆಂದು ಅವರು ಭಾವಿಸಿ ಅಂತೆಯೇ ಮಾಡಿದರು.

ಗೋಹಾ ಈ ವಿಷಯವನ್ನು ನಗರದಲ್ಲೆಲ್ಲಾ ಹೇಳುತ್ತಾ ಬಂದನು. ಎಲ್ಲರೂ ಸಂಪನ್ನನನ್ನು ನೋಡಿ ನಗಲಾರಂಭಿಸಿದರು. ಗೋಹನನ್ನು ಅಪಹಾಸ್ಯಮಾಡ ಹೋಗಿ ತಾನೇ ನಗಪಾಟಲಿಗೆ ಗುರಿಯಾಗಬೇಕಾಯಿತೆಂದು ಆಗ ಸಂಪನ್ನನು ಅರಿತನು.



# ಆಸ್ಟ್ರೇಲಿಯಾ ನವಿಲು : ಅವುಗಳ ಹಾಡು

ಇದೊಂದು ಅಪೂರ್ವ ಪಕ್ಷಿ. ಇದು ಆಸ್ಟ್ರೇಲಿಯಾದಲ್ಲಿಹೊರತು ಮತ್ತೆಲ್ಲಿಯೂ ಇಲ್ಲ. ನವಿಲಿಗಿರುವಹಾಗಿಯೇ ಇದಕ್ಕೆ ಅಂದವಾದ ಪಿಂಛವಿದೆ. ಗಂಡುಹಕ್ಕಿ ಆ ಪಿಂಛವನ್ನು ಬಿಡಿಸಿ ಆಡುವುದು ಮಾತ್ರವಲ್ಲ ಸುಶ್ರಾವ್ಯವಾಗಿ ಹಾಡುತ್ತದೆ. ಇದರ ಪಿಂಛ "ಲೈರ್" ಎಂಬ ಗ್ರೀಕು ವೀಣೆಯ ಆಕಾರದಲ್ಲಿ ಇರುವುದರಿಂದ ಇದಕ್ಕೆ "ಲೈರ್ ಬರ್ಡ್" ಎಂದು ಹೆಸರಿಟ್ಟರು.

ನಾಗರಿಕ ಪ್ರಪಂಚಕ್ಕೆ ಈ ಹಕ್ಕಿ ಮೊದಲು ಕಂಡದ್ದು ೧೭೯೮ ರಲ್ಲಿ. ಅನಂತರ ಇದನ್ನು ಅನೇಕರು ಶೋಧಿಸಿದ್ದಾರೆ; ಆದರೆ ಕಂಡವರು ಬಲುಕಡಮೆ. ಅದರ ಗಾನವನ್ನುಮಾತ್ರ ಹೆಚ್ಚುಮಂದಿ ಕೇಳಿದ್ದಾರೆ. ಇದು ಪಿಂಛ ಬಿಡಿಸಿದಾಗ ಗಾಳಿಗೆ ಅದರ ಗರಿಗಳು ಕದಲುವುದರಿಂದಲೇ ಹಾಡು ಕೇಳಿಬರುವುದೆಂದು ಅನೇಕರು ನಂಬುತ್ತಾರೆ.

ಈ ಪಕ್ಷಿ ನಮ್ಮ ಕೋಳಿಯಷ್ಟು ಪರಿಮಾಣದಲ್ಲಿತ್ತದೆ. ಅದರ ಸುಂದರ ಬಾಲದಲ್ಲಿ ೧೬ ನೀಳವಾದ ಗರಿಗಳಿರುತ್ತವೆ. ಪಿಂಛದ ಎರಡು ಬದಿಯಲ್ಲಿರುವ ಗರಿಯ ನೀಳ ೩೦ ಅಂಗುಲ. ಇವುಗಳ ನಡುವೆ ೧೨ ಕುಚ್ಚುಗಳಿರುವ ಗರಿಗಳಿರುತ್ತವೆ. ಇವಲ್ಲದೆ ಎರಡು ಬೆತ್ತಗಳಂತಹ ಗರಿಗಳು ಕೂಡಾ ಪಿಂಛದಲ್ಲಿವೆ.

ಈ ಪಕ್ಷಿಗಳಲ್ಲಿ ಎರಡು ಬಗೆಗಳಿವೆ. ಒಂದರ ಬಾಲ ಬಹಳ ದೊಡ್ಡದು. ಎರಡನೆಯದರದು ತೀರ ಚಿಕ್ಕದು. ಚಿಕ್ಕ ಬಾಲದ ಹಕ್ಕಿಯ ಮೈಬಣ್ಣ ಮಾತ್ರ ಬಹಳ ಸುಂದರವಾಗಿರುತ್ತದೆ. ಈ



ಎರಡು ಜಾತಿಗಳೂ ಮನೋಹರವಾಗಿ ಹಾಡುತ್ತವೆ. ಅತಿಮಧುರವಾದ ಸ್ವರವು ಅವುಗಳ ಕಂಠದಿಂದ ಅನಾಯಾಸವಾಗಿ ಹೊರಡುತ್ತದೆ.

ಈ ಪಕ್ಷಿ ಹಾಡುವುದುಮಾತ್ರವಲ್ಲ, ಇತರ ಮೃಗ ಪಕ್ಷಿಗಳನ್ನೂ ಅದ್ಭುತವಾಗಿ ಅನುಕರಿಸುತ್ತದೆ. ಹೆಣ್ಣಿಗಿಂತಲೂ ಗಂಡುಪಕ್ಷಿಯೇ ಹಾಡುವುದರಲ್ಲಿ ಗಟ್ಟಿಗ. ಅವು ಎಲ್ಲಾ ಕಾಲದಲ್ಲಿ ಹಾಡುತ್ತವಾದರೂ ಋತುಕಾಲದಲ್ಲಿ ಹಾಡುವುದು ಹೆಚ್ಚು.

ಈ ಪಕ್ಷಿಗಳಿಗೆ ಮೇ ತಿಂಗಳಿನಲ್ಲಿ—ವಸಂತಾರಂಭದಲ್ಲಿ ಋತು ಪ್ರಾರಂಭವಾಗುತ್ತದೆ. ಪ್ರತಿ ಗಂಡು ಪಕ್ಷಿಯೂ ಒಂದು ಚದುರ ಫರ್ಲಾಂಗಿಗೂ ಹೆಚ್ಚಿನ ಸ್ಥಳವನ್ನು ತನ್ನ ಕ್ಷೇತ್ರವನ್ನಾಗಿ ಮಾಡಿಕೊಂಡು. ಅದರಲ್ಲಿ ಚಿಕ್ಕ ಚಿಕ್ಕ ದಿಬ್ಬಗಳನ್ನು ನಿರ್ಮಿಸುತ್ತದೆ. ಅದಕ್ಕೆ ಹಾಡುತ್ತಾ ಕುಣಿಯಬೇಕೆಂದು ತೋರಿದಾಗ, ತಿಂಡಿಕೂಡಾ ಮರೆತು ಆ ದಿಬ್ಬಗಳಲ್ಲೊಂದರ ಬಳಿಗೆ ಓಡಿ ಪಿಂಛಬಿಡಿಸಿ ಕೊರಳೆತ್ತಿ ಹಾಡುತ್ತದೆ. ಆ ಹಾಡನ್ನು ಕೇಳಲು ಹೆಣ್ಣು ಹಕ್ಕಿ ಓಡಿಬರುತ್ತದೆ.

ಈ ಪಕ್ಷಿಗಳು ಆಜನ್ಮದಾಂಪತ್ಯವನ್ನು ನಿರ್ವಹಿಸುತ್ತವೆ. ಹೆಣ್ಣು ಹಕ್ಕಿ ತುಂಬ ಕೆಲಸ ಜಾಣೆ. ಏಪ್ರಿಲ್, ಮೇ, ಜೂನ್ ತಿಂಗಳುಗಳಲ್ಲಿ ಅದು ಗೂಡು ಕಟ್ಟುತ್ತದೆ. ಈ ಗೂಡು ನೆಲದಲ್ಲಿಯೂ ಮರಗಳಬದಿಯಲ್ಲಿಯೂ ಕಾಣಿಸುತ್ತವೆ. ಎತ್ತರವಾದ ಮರಗಳ ನಡುವೆ ನೆಲಕ್ಕೆ ೮೦ ಅಡಿ ಎತ್ತರದಲ್ಲಿಯೂ ಗೂಡು ಕಟ್ಟುವುದುಂಟು. ಆದರೂ ಹೆಚ್ಚು ಗೂಡುಗಳು ನೆಲದಲ್ಲಿ ೩ ರಿಂದ ೧೦ ಅಡಿಗಳ ಎತ್ತರದಲ್ಲಿ ಪ್ರವಾಹಗಳ ಮೇಲುಭಾಗದಲ್ಲಿರುವ ಮರಗಳಲ್ಲಿಯೇ ಕಾಣಿಸುತ್ತವೆ.



## ಚಿತ್ರ ಕಥೆ





ಒಂದು ದಿನ ಸಾಯಂಕಾಲ ವಾಸು ಮತ್ತು ಗೋಪಿಯರು 'ಟೈಗರ್' ನಾಯಿಯೊಂದಿಗೆ ತಿರುಗಾಡಲು ಹೊರಟರು. ದಾರಿಯಲ್ಲಿ ಮೇಯುತ್ತಿದ್ದ ಟಗರೊಂದು ಅವರನ್ನು ನೋಡಿ ಓಡಿಸಿಕೊಂಡು ಬಂತು. ವಾಸು ಗೋಪಿಯರು ಹೆದರಿ ಓಡಿದರು. ದಾರಿಯಲ್ಲೊಂದು ಕಿರುಕಾಲುವೆಗೆ ಹಲಗೆಯ ಪಾಪಿತ್ತು. ವಾಸು ಗೋಪಿಯರು ಅದನ್ನು ದಾಟುತ್ತಲೇ ಟೈಗರೂ ಅವರ ಹಿಂದೆಯೇ ದಾಟಿ, ಹಲಗೆಪಾಪನ್ನು ಈಚೆಗೆ ಎಳೆದುಹಾಕಿತು. ಅಲ್ಲಿಯವರೆಗೂ ಅವರನ್ನು ಓಡಿಸಿಕೊಂಡು ಬಂದ ಟಗರು ಪಾಪು ಇಲ್ಲದ್ದು ತಿಳಿಯದೆ ಬೊಳೊಮ್ಮನೆ ಕಾಲುವೆಯೊಳಗೆ ಬಿತ್ತು!





Printed by B. NAGI REDDI at the B. N. K. Press Private Ltd., and Published by him for Chandamama Publications, from Madras 26.—Controlling Editor: SRI 'CHAKRAPANI

# ಇದನ್ನು ಓದಿ ನಿಮಗೆ ಆಶ್ಚರ್ಯವಾಗಬಹುದು...

ರೋಮನ್ ಚಕ್ರವರ್ತಿ ನೀರೋನ ಕಾಲದಲ್ಲಿ ಒಂದು ಗಾಜಿನ ಲೋಟೆಗೆ 27,000 ರೂಪಾಯಿಗಳಷ್ಟು ಬೆಲೆಯಿರುತ್ತಿತ್ತು! ಯಾರಾದರೊಬ್ಬ ನಿರ್ಭಾಗ್ಯ ಗುಲಾಮನು ಅದನ್ನು ಒಡೆದರೆ ಅವನಿಗೆ ಕಠಿಣ ಶಿಕ್ಷೆ ಸಿಗುತ್ತಿತ್ತು. ಆದರೆ ಅಂಥಾದ್ದೇ ಗಾಜಿನ ಲೋಟೆಗಳನ್ನು ಈಗ ಯಾವ ಸಣ್ಣ ಅಂಗಡಿಯಲ್ಲಿಯೂ ಕೂಡ 5 ಅಥವಾ 6 ಆಣೆ ಬೆಲೆಗೆ ಕೊಂಡುಕೊಳ್ಳಬಹುದು.

ಆದರೆ ಜಗತ್ತಿನಲ್ಲಿ ರಾಜರ ಬೊಕ್ಕಸಗಳನ್ನೆಲ್ಲಾ ಬರಿದು ಮಾಡಿದರೂ ಸಿಗದಂತಹ ವಸ್ತುಗಳು ಕೂಡ ಇವೆ.





ಮೊಗಲ್ ಬಾದಶಹ ಬಾಬರನ ಮಗ ಹುಮಾಯೂನನು ಒಮ್ಮೆ ಒಂದು ಕಠಿಣ ರೋಗಕ್ಕೆ ತುತ್ತಾದನು. ಹಕೀಮರೆಲ್ಲ ಎಷ್ಟು ಪ್ರಯತ್ನ ಮಾಡಿದರೂ ಅವನ ರೋಗವನ್ನು ಗುಣಪಡಿಸಲು ಸಾಧ್ಯವಾಗಲಿಲ್ಲ. ಕೊನೆಗೆ ಬಾಬರನು ಮಗ ಮಲಗಿದ್ದ ಪಲ್ಲಂಗಕ್ಕೆ ಪ್ರದಕ್ಷಿಣೆ ಮಾಡಿ "ದೇವರೇ, ನನ್ನ ಮಗನ ಪ್ರಾಣವನ್ನು ಉಳಿಸಿ ಅದರ ಬದಲಿಗೆ ನನ್ನ ಪ್ರಾಣವನ್ನು ತೆಗೆದುಕೊಳ್ಳಿರಿ" ಎಂದು ಪ್ರಾರ್ಥಿಸಿದನು. ಅವನ ಪ್ರಾರ್ಥನೆ ಫಲಿಸಿತು.



ಇಂದು ಗಾಜಿನ ಲೋಟೆ ಬಹಳ ಅಗ್ಗವಾಗಿದೆಯೆಂಬುದೇನೋ ನಿಜ. ಆದರೆ ಆರೋಗ್ಯ ಬಾಬರ್ ಹುಮಾಯೂನರ ಕಾಲದಲ್ಲಿದ್ದಂತೆ ಇಂದೂ ಒಂದು ಅಮೂಲ್ಯ ಸಂಪತ್ತಾಗಿದೆ. ವಾಸ್ತವವಾಗಿಯೂ ಆರೋಗ್ಯವೆಂದರೆ ಒಂದು ವರ ದಾನವೇ ಸರಿ. ಆದರೆ ಆರೋಗ್ಯಕ್ಕೆ ಕೊಳೆಯಿಂದ ಸದಾ ಅಪಾಯವಿದೆ. ಕೊಳೆಯಿಂದ ತಪ್ಪಿಸಿಕೊಳ್ಳುವುದು ನಮಗೆ ಸಾಧ್ಯವಿಲ್ಲ. ಕೊಳೆಯಲ್ಲಿ ರೋಗದ ಕ್ರಿಮಿಗಳಿವೆ.




**ಲೈಫ್‌ಬಾಯ್ ಸೋಪು ಈ ಕ್ರಿಮಿಗಳನ್ನು ತೊಳೆದುತೆಗೆದು ನಿಮ್ಮ ಆರೋಗ್ಯವನ್ನು ರಕ್ಷಿಸುತ್ತದೆ. ಯಾವಾಗಲೂ ಲೈಫ್‌ಬಾಯ್ ಸೋಪಿನಿಂದ ಸ್ನಾನಮಾಡಿರಿ.**

L. 279-50 KN

ಹಿಂದೂಸ್ಥಾನ್ ಲೀವರ್ ಲಿಮಿಟೆಡ್, ಅವರಿಂದ ತಯಾರಿಸಲ್ಪಟ್ಟದ್ದು.


Kashmir


Kashmir



Photo by S. H. Kotak



ಬಹುಮಾನ ಪಡೆದ ಶೀರ್ಷಿಕೆ

ಶಿಲ್ಪಸ್ಪರ್ಧೆಗೆ ಇದೊಂದೇ ಸಾಕು!

ಕಳಿಸಿದವರು: ಎಸ್. ರಾಮಕೃಷ್ಣ




ರೂಪಧರನ ಯಾತ್ರೆಗಳು - ೧೧